**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–I, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಡಬ್ಲ್ಯೂಸಿಎ/ಸಿಆರ್–21/09ಎಫ್, ದಿನಾಂಕ:29ನೇ ಜುಲೈ, 2009**

| ಅರ್ಜಿದಾರರು: | | ಪ್ರತಿವಾದಿಗಳು: |
|---|---|---|
| 1) ಶ್ರೀಮತಿ ತಮಿಳ್ ಸೆಲ್ವಿ, W/o ಲೇಟ್ ಇ. ರಾಜು, ಡೋರ್ ನಂ.4/148/8, ಆಶ್ರಯ, ಜಲ್ಲಿಗುಡ್ಡೆ, ಕೊಟ್ಟಾರಚೌಕಿ, ಪೋಸ್ಟ್, ಅಶೋಕನಗರ, ಮಂಗಳೂರು–6. | ವಿರುದ್ಧ | 1) ಮೆ: ನ್ಯೂ ಮಂಗಳೂರು ಪೋರ್ಟ್ ಟ್ರಸ್ಟ್, ರಿಜಿಸ್ಟರ್ಡ್ ಕಾರ್ಗೋ, ಹ್ಯಾಡ್ಲಿಂಗ್ ವರ್ಕರ್ಸ್ ಅಡ್ಮಿನಿಸ್ಟ್ರೇಟಿವ್ ವಿಂಗ್, ಪಣಂಬೂರು, ಮಂಗಳೂರು.<br>2) ಮೆ: ಹೆಚ್.ಎಂ.ಎಲ್. ಏಜೆನ್ಸಿಸ್ ಪ್ರೈ.ಲಿ., ವಿ.ಕೆ. ಟವರ್ಸ್, ಎನ್.ಹೆಚ್.17, ಬಂಗ್ರ ಕೊಳೂರು, ಮಂಗಳೂರು. |

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ತಮಿಳ್ ಸೆಲ್ವಿ W/o ದಿವಂಗತ ಇ. ರಾಜು, ಇವರು ತಮ್ಮ ಗಂಡನಾದ ಶ್ರೀ ದಿವಂಗತ, ಇ.ರಾಜು, ಮಂಗಳೂರು ನ್ಯೂ ಪೋರ್ಟ್ ಟ್ರಸ್ಟ್, ರಿಜಿಸ್ಟರ್ಡ್ ಕಾರ್ಗೋ, ಹ್ಯಾಡ್ಲಿಂಗ್ ವರ್ಕರ್ಸ್ ಅಡ್ಮಿನಿಸ್ಟ್ರೇಟಿವ್ ವಿಂಗ್, ಪಣಂಬೂರು, ಮಂಗಳೂರು. ಇವರು ಪ್ರತಿವಾದಿಗಳಾದ ಮೆ: ಹೆಚ್.ಎಂ.ಎಲ್. ಏಜೆನ್ಸಿಸ್ ಪ್ರೈ.ಲಿ., ಇವರಲ್ಲಿ ಸ್ಟೀವ್‌ಡೋರಿಂಗ್ ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:12.03.2009 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು. ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ.ಜಿ. ನಾಗೇಶ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ, ಉಪವಿಭಾಗ–1, ಮಂಗಳೂರು.

ಪಿ.ಆರ್.741

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ, ನ್ಯಾಯಾಲಯ, ಕೊಪ್ಪಳ ಜಿಲ್ಲೆ, ಕೊಪ್ಪಳ**

**ಪ್ರಕಟಣೆ: ಕಾಅಕೊ/ಕಾನಪ/ಮ.ಪ್ರ/ಸಂಖ್ಯೆ:–104, 2009, ದಿನಾಂಕ:29ನೇ ಜುಲೈ, 2009**

| ಅರ್ಜಿದಾರರು: | | ಪ್ರತಿವಾದಿಗಳು: |
|---|---|---|
| ಶ್ರೀಮತಿ ರೇಖಾ ಡಿ. ತೆಗ್ಗಿನಮನೆ,<br>ಗಂಡ: ದೇವೆಂದ್ರಪ್ಪ ಎಸ್. ತೆಗ್ಗಿನಮನೆ,<br>ವಾಸ: ಹಿರೇವಕ್ಕಲಕುಂಟಿ<br>ತಾ: ಯಲಬುರ್ಗಾ. | ವಿರುದ್ಧ | 1) ಪಿ. ಶ್ರೀನಿವಾಸುರೆಡ್ಡಿ ತಂದೆ ಪೆದ್ದಬಸಪ್ಪ, ಲಾರಿ ಮಾಲೀಕರು, ತೋರಣಗಲ್ಲು.<br>2) ದಿ ಮ್ಯಾನೇಜರ್, ಮೆ: ಶ್ರೀ ರಾಮ ಜನರಲ್ ಇನ್ಸೂರೆನ್ಸ್ ಕಂ.ಲಿ., ಬಳ್ಳಾರಿ.<br>3) ಶಂಕರಗೌಡ ತಂದೆ ಲೇಟ್ ಕಲ್ಲಪ್ಪ, ಸಿದ್ದಾಪುರ ಗ್ರಾಮ, ತಾ: ಚಳ್ಳಿಕೇರಾ, ಜಿ: ಚಿತ್ರದುರ್ಗ.<br>4) ಶ್ರೀಮತಿ ಮಲ್ಲಮ್ಮ ಗಂಡ ಶಂಕರಗೌಡ,ಸಿದ್ದಾಪುರ ತಾ: ಚಳ್ಳಿಕೇರಾ ಜಿ: ಚಿತ್ರದುರ್ಗ. |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ ದೇವೆಂದ್ರ ತಂದೆ ಶಂಕರಗೌಡ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:06.05.2009 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ದೇವೆಂದ್ರ ಇವರ ವಾರಸುದಾರರಾದ ಶ್ರೀಮತಿ ರೇಖಾ ಡಿ. ತೆಗ್ಗಿನಮನೆ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ

ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್.745

**IN THE COURT OF COMMISSIONER FOR WORKMEN'S COMPENSATION BIDAR**

**No.LOB/WCA/Cr-F-30/2009,**

| **Applicants:** | | **Respondents:** |
|---|---|---|
| 1) Shaheen sana W/o Late Md Yaseen Karighar, Age 25 years, Occu: Household, R/o Dharagir Locality Basawakalyan, Dist: Bidar. | **V/s** | Mastan S/o Iquabal Patil, Age: Major Occu: Business and Owner of Lorry No.KA-39-3069/ R/o Wanjarkhed Tq:Bhalki Dist: Bidar.<br>2) The Manager, The New India Assurance Co.Ltd., Bidar. |

**PROCLAIMATION**

Sri/ Smt: Shaheen sana W/o. F/o. S/o. Late Md Yasin karighar R/o Dharagir locality Basawakalyan Dist: Bidar. have/ has filled application in this Court claiming compensation stating that Late: Md Yaseen was working as Cleaner Under the Respondent No I he met with an accident arising out of and during the course of employment as a result he died on 02.06.2009.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications on objections are received within the specified date the Court will proceeded further in the matter.

Commissioner for Workmen's
Compensation, Bidar.

**IN THE COURT OF COMMISSIONER FOR WORKMEN'S COMPENSATION BIDAR**

**No.LOB/WCA/Cr-F-31/2009,**

| **Applicants:** | | **Respondents:** |
|---|---|---|
| 1) Smt. A. Shakuntalabai W/o Late A. Bansi Abbaji, Age:55 years Occu: House hold, R/o SOR Qtrs. Bidar, Now at Ambedkar nagar post Pangaon Tq: Renepar Dist: Latur (M.S.). | **V/s** | 1) The Senior Section Engineer (P-way) South Centre Railway, Bidar. |

**PROCLAIMATION**

Smt. A. Shakuntalabai W/o. F/o. S/o. Late A. Bansi Abbaji R/o SOR Qtrs. Bidar, Now at Ambedkar nagar post Pangaon Tq: Renepar Dist: Latur (M.S.). have/ has filled application in this Court claiming compensation stating that Late: A. Bansi Abbaji was working as Labour Under the Respondent No I he met with an accident arising out of and during the course of employment as a result he died on 31.12.2007.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications on objections are received within the specified date the Court will proceeded further in the matter.

Commissioner for Workmen's
Compensation, Bidar.

PR-747

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಚಿಕ್ಕಮಗಳೂರು ಜಿಲ್ಲೆ**

**ಸಂಖ್ಯೆ: ಕಾಪಕಾ:ಎಫ್:9/2008, ದಿನಾಂಕ:6ನೇ ಆಗಸ್ಟ್, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) ಬೋಕ್ಯಾನಾಯ್ಕ ಬಿನ್ ತಾರಾನಾಯ್ಕ ವಾಸ: ಕರಕುಟ್ಟಿಗ್ರಾಮ ಲಕ್ಕವಳ್ಳಿ ಹೋಬಳಿ, ತರೀಕೆರೆ ತಾಲ್ಲೂಕು. | **ವಿರುದ್ಧ** | 1) ದಿ ಡೈರೆಕ್ಟರ್ M/s ಸ್ಟ್ರೀಪ್ ಟ್ರಾನ್ಸ್ ಕಾರ್ಗೋ ಪ್ರೈ.ಲಿ., ನ.76/77 ಸ್ಟ್ರೀಪ್ ಕಾಂಪ್ಲೆಕ್ಸ್, ದೇವರಾಜ ಅರಸ್ ಟ್ರಕ್ ಟರ್ಮಿನಲ್, ಯಶವಂತಪುರ, ಬೆಂಗಳೂರು–22. |
| 2) ಕಾಳಿಬಾಯಿ ಕೋಂ ಲೋಕ್ಯಾನಾಯ್ಕ ವಾಸ: ಕರಕುಟ್ಟಿಗ್ರಾಮ, ಲಕ್ಕವಳ್ಳಿ ಹೋಬಳಿ, ತರೀಕೆರೆ ತಾಲ್ಲೂಕು. | | 2) ದಿ ಮ್ಯಾನೇಜರ್, ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಬೆಂಗಳೂರು ವಿಭಾಗ ಕಛೇರಿ, ಸಂಖ್ಯೆ: 7, 982, 2ನೇ ಮಹಡಿ, ಕೋರಮಂಗಲ, ಬೆಂಗಳೂರು–34. |

**ಪ್ರಕಟಣೆ**

ಮೃತ ದೇವೇಂದ್ರ ನಾಯ್ಕ್ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:08.10.2007 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಹೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು, ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಕೆ.ಜಿ. ಜಾನ್ಸನ್**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ–1, ಚಿಕ್ಕಮಗಳೂರು.

ಪಿ.ಆರ್.750

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬಿ–2:ಡಬ್ಲ್ಯೂಸಿಎ: ಮಪ್ರ–100:2009, ದಿನಾಂಕ:31ನೇ ಜುಲೈ, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| ಶ್ರೀಮತಿ ಲಲಿತಾ ಗಂಡ ರಮೇಶ ಚವಾಣ ಮತ್ತು ಇತರರು, ಸಾ: ಮರಡಗಿ ಎಲ್ ಟಿ ತಾ: ಬ.ಬಾಗೇವಾಡಿ, ಜಿಲ್ಲೆ: ಬಿಜಾಪುರ. | **ವಿರುದ್ಧ** | 1) ಶ್ರೀ ಸುಭಾಷ ತಂದೆ ಆತ್ಮಾರಾಮ ವಳಂಜು, ಸಾ: ಮರಗೋಡ ಪೊಂಡಾ, ಗೋವಾ. |
| | | 2) ದಿ ಬ್ರ್ಯಾಂಚ್ ಮ್ಯಾನೇಜರ್ ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಬಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ರಮೇಶ್ ಶಂಕರ ಚವಾಣ, ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:19.06.2009 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲಿ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು,
ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬಿ–2:ಡಬ್ಲ್ಯೂಸಿಎ: ಮಪ್ರ–101:2009, ದಿನಾಂಕ:27ನೇ ಜುಲೈ, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| ಶ್ರೀಮತಿ ಮಲ್ಲಮ್ಮ ಗಂಡ ನಿಂಗಪ್ಪ ಕೋಳಿ ಸಾ: ಕುಂಬಾರ ಗಲ್ಲಿ, ಬಿಜಾಪುರ. | **ವಿರುದ್ಧ** | ದಿ ಮ್ಯಾನೇಜಿಂಗ್ ಡೈರೆಕ್ಟರ್, ಎಂಎಸ್‌ಇ ಡಿಸ್ಟ್ರಿಬ್ಯೂಷನ್ ಕಂ.ಲಿ., ಸೋಲಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ನಿಂಗಪ್ಪ ತಂದೆ ಈರಪ್ಪ ಕೋಳಿ, ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:17.10.2008 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲಿ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು,
ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್.753

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ**

**ಸಂಖ್ಯೆ:ಎಎಲ್‌ಸಿಡಿ/ಪಿಜಿಎ/ಸಿ.ಆರ್–10/2009,**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) ಚನ್ನಪ್ಪ ಬಿನ್ ಸಣ್ಣರಂಗಪ್ಪ, 30 ವರ್ಷ, ಕೆಡವಿಗೆರೆ, ವೆಂಗಲಾಪುರ ಪೋಸ್ಟ್, ಹೊಸದುರ್ಗ ತಾಲ್ಲೂಕು. | **ವಿರುದ್ಧ** | 1) ದಿ ಕನ್ಸರ್‌ವೇಟರ್ ಆಫ್ ಪಾರೆಸ್ಟ್, ಬಳ್ಳಾರಿ ಸರ್ಕಲ್, ಬಳ್ಳಾರಿ.<br>2) ದಿ ಡೆಪ್ಯೂಟಿ ಕನ್ಸರ್‌ವೇಟರ್ ಆಫ್ ಫಾರೆಸ್ಟ್, ಚಿತ್ರದುರ್ಗ ವಿಭಾಗ, ಫಾರೆಸ್ಟ್ ಡಿಪಾರ್ಟ್‌ಮೆಂಟ್, ಜಯದೇವಹಟ್ಟಿ, ಚಿತ್ರದುರ್ಗ.<br>3) ದಿ ಅಸಿಸ್ಟೆಂಟ್ ಕನ್ಸರ್‌ವೇಟರ್ ಆಫ್ ಫಾರೆಸ್ಟ್ ಹಿರಿಯೂರು ಸಬ್ ಡಿವಿಜನ್, ಫಾರೆಸ್ಟ್ ಡಿಪಾರ್ಟ್‌ಮೆಂಟ್, ತಾಲ್ಲೂಕು, ಆಫೀಸ್ ಹತ್ತಿರ, ಹಿರಿಯೂರು.<br>4) ದಿ ರೇಂಜ್ ಫಾರೆಸ್ಟ್ ಆಫೀಸರ್, ಫಾರೆಸ್ಟ್ ಡಿಪಾರ್ಟ್‌ಮೆಂಟ್, ರಿಜನಲ್ ಡಿವಿಜನಲ್, ಹೊಸದುರ್ಗ. |

**ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಯಪಡಿಸುವುದೇನೆಂದರೆ, ಮೇಲ್ಕಂಡ ಅರ್ಜಿದಾರರು ಈ ಪ್ರಾಧಿಕಾರದ ನ್ಯಾಯಾಲಯದಲ್ಲಿ ದಿನಾಂಕ:10.07.2009 ರಂದು ಉಪಧನ ಪಾವತಿ ಕಾಯ್ದೆ–1972 ಹಾಗೂ ಅದರಡಿಯ ಕರ್ನಾಟಕ ನಿಯಮಾವಳಿಗಳು–1973 ರಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಸದರಿ ಅರ್ಜಿಯಲ್ಲಿ ತಮ್ಮ ತಂದೆಯವರಾದ ಲೇ: ಸಣ್ಣರಂಗಪ್ಪ ಬಿನ್ ಕಾಳಪ್ಪ ಇವರು ಮೇಲ್ಕಂಡ ಪ್ರತಿವಾದಿ ಸಂಸ್ಥೆಯಲ್ಲಿ 27 ವರ್ಷಗಳ ಸೇವೆ ಸಲ್ಲಿಸಿದ್ದು, ನಂತರದಲ್ಲಿ ದಿನಾಂಕ:07.01.2009 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ಪ್ರಕಾರ ಬರಬೇಕಾದ ಉಪಧನವನ್ನು ಕೊಡಿಸಿಕೊಡಬೇಕೆಂದು ಪ್ರಾರ್ಥಿಸಿರುತ್ತಾರೆ.

ಸದರಿ ಪ್ರಕರಣದ ವಿಚಾರಣೆಯು ಈ ನ್ಯಾಯಾಲಯದಲ್ಲಿ ಪ್ರಸಕ್ತದಲ್ಲಿ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ, ಮೇಲೆ ಸೂಚಿಸಿರುವ ಪ್ರಕರಣದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ, ಬೇರೆ ಯಾರಾದರೂ

ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು/ ಜೀವಂತ ಕುಟುಂಬ ಸದಸ್ಯರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ, ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ ಮೂವತ್ತು (30) ದಿನಗಳೊಳಗಾಗಿ ತಮ್ಮ ಲಿಖಿತ ಆಕ್ಷೇಪಣೆಗಳನ್ನು, ಸಕ್ಷಮ ಪ್ರಾಧಿಕಾರದಿಂದ ಪಡೆದ ಸೂಕ್ತ ಮೂಲ ದಾಖಲೆಗಳು ಹಾಗೂ ಇತರೆ ಸಾಕ್ಷ್ಯಾಧಾರಗಳೊಂದಿಗೆ, ಈ ಪ್ರಾಧಿಕಾರದ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಈ ರಾಜ್ಯಪತ್ರದಲ್ಲಿ ವಿಧಿಸಿರುವ ಮೇಲ್ಕಂಡ ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲವೆಂದು ಈ ಮೂಲಕ ಸ್ಪಷ್ಟಪಡಿಸಲಾಗಿದೆ.

**ಡಾ: ಶ್ರೀಪಾದ್ ಎಸ್.ಬಿ.**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಉಪಧನ
ಪಾವತಿ ಕಾಯ್ದೆ, ನಿಯಂತ್ರಣಾಧಿಕಾರಿಗಳು,
ಬಳ್ಳಾರಿ ವಿಭಾಗ, ದಾವಣಗೆರೆ.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ**
**ಸಂಖ್ಯೆ:ಎಎಲ್‌ಸಿಡಿ/ಪಿಜಿಎ/ಸಿ.ಆರ್–11/2009,**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) ಶ್ರೀಮತಿ ಕೆಂಚಮ್ಮ ಕೋಂ ಲೇ. ಕರಿಯಪ್ಪ ಕೆಡವಿಗೆರೆ, ವೆಂಗಲಾಪುರ ಪೋಸ್ಟ್, ಹೊಸದುರ್ಗ ತಾಲ್ಲೂಕು. | **ವಿರುದ್ಧ** | 1) ದಿ ಕನ್ಸರ್‌ವೇಟರ್ ಆಫ್ ಪಾರೆಸ್ಟ್, ಬಳ್ಳಾರಿ ಸರ್ಕಲ್, ಬಳ್ಳಾರಿ.<br>2) ದಿ ಡೆಪ್ಯೂಟಿ ಕನ್ಸರ್‌ವೇಟರ್ ಆಫ್ ಫಾರೆಸ್ಟ್, ಚಿತ್ರದುರ್ಗ ವಿಭಾಗ, ಫಾರೆಸ್ಟ್ ಡಿಪಾರ್ಟ್‌ಮೆಂಟ್, ಜಯದೇವಹಟ್ಟಿ, ಚಿತ್ರದುರ್ಗ.<br>3) ದಿ ಅಸಿಸ್ಟೆಂಟ್ ಕನ್ಸರ್‌ವೇಟರ್ ಆಫ್ ಫಾರೆಸ್ಟ್ ಹಿರಿಯೂರು ಸಬ್ ಡಿವಿಜನ್, ಫಾರೆಸ್ಟ್ ಡಿಪಾರ್ಟ್‌ಮೆಂಟ್, ತಾಲ್ಲೂಕು, ಆಫೀಸ್ ಹತ್ತಿರ, ಹಿರಿಯೂರು.<br>4) ದಿ ರೇಂಜ್ ಫಾರೆಸ್ಟ್ ಆಫೀಸರ್, ಫಾರೆಸ್ಟ್ ಡಿಪಾರ್ಟ್‌ಮೆಂಟ್, ರಿಜನಲ್ ಡಿವಿಜನಲ್, ಹೊಸದುರ್ಗ. |

**ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಯಪಡಿಸುವುದೇನೆಂದರೆ, ಮೇಲ್ಕಂಡ ಅರ್ಜಿದಾರರು ಈ ಪ್ರಾಧಿಕಾರದ ನ್ಯಾಯಾಲಯದಲ್ಲಿ ದಿನಾಂಕ:10.07.2009 ರಂದು ಉಪಧನ ಪಾವತಿ ಕಾಯ್ದೆ–1972 ಹಾಗೂ ಅದರಡಿಯ ಕರ್ನಾಟಕ ನಿಯಮಾವಳಿಗಳು–1973 ರಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಸದರಿ ಅರ್ಜಿಯಲ್ಲಿ ಅವರ ಪತಿ ಲೇ: ಶ್ರೀ ಕರಿಯಪ್ಪ ಬಿನ್ ಕೆಂಚಪ್ಪ, ಇವರು ಮೇಲ್ಕಂಡ ಪ್ರತಿವಾದಿ ಸಂಸ್ಥೆಯಲ್ಲಿ 22 ವರ್ಷಗಳ ಸೇವೆ ಸಲ್ಲಿಸಿದ್ದು, ನಂತರದಲ್ಲಿ ದಿನಾಂಕ:24.06.2007 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ಪ್ರಕಾರ ಬರಬೇಕಾದ ಉಪಧನವನ್ನು ಕೊಡಿಸಿಕೊಡಬೇಕೆಂದು ಪ್ರಾರ್ಥಿಸಿರುತ್ತಾರೆ.

ಸದರಿ ಪ್ರಕರಣದ ವಿಚಾರಣೆಯು ಈ ನ್ಯಾಯಾಲಯದಲ್ಲಿ ಪ್ರಸಕ್ತದಲ್ಲಿ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ, ಮೇಲೆ ಸೂಚಿಸಿರುವ ಪ್ರಕರಣದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ, ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು/ ಜೀವಂತ ಕುಟುಂಬ ಸದಸ್ಯರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ, ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ ಮೂವತ್ತು (30) ದಿನಗಳೊಳಗಾಗಿ ತಮ್ಮ ಲಿಖಿತ ಆಕ್ಷೇಪಣೆಗಳನ್ನು, ಸಕ್ಷಮ ಪ್ರಾಧಿಕಾರದಿಂದ ಪಡೆದ ಸೂಕ್ತ ಮೂಲ ದಾಖಲೆಗಳು ಹಾಗೂ ಇತರೆ ಸಾಕ್ಷ್ಯಾಧಾರಗಳೊಂದಿಗೆ, ಈ ಪ್ರಾಧಿಕಾರದ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಈ ರಾಜ್ಯಪತ್ರದಲ್ಲಿ ವಿಧಿಸಿರುವ ಮೇಲ್ಕಂಡ ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲವೆಂದು ಈ ಮೂಲಕ ಸ್ಪಷ್ಟಪಡಿಸಲಾಗಿದೆ.

**ಡಾ: ಶ್ರೀಪಾದ್ ಎಸ್.ಬಿ.**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಉಪಧನ
ಪಾವತಿ ಕಾಯ್ದೆ, ನಿಯಂತ್ರಣಾಧಿಕಾರಿಗಳು,
ಬಳ್ಳಾರಿ ವಿಭಾಗ, ದಾವಣಗೆರೆ.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ**

**ಸಂಖ್ಯೆ:ಎಎಲ್‌ಸಿಡಿ/ಪಿಜಿಎ/ಸಿ.ಆರ್–12/2009,**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) ಈರಮ್ಮ ಕೋಂ ಗಗನಬಹದ್ದೂರ್, ಲಕ್ಷ್ಮೀ ಸದನ, ಎನ್.ಸಿ. ಕಾಲೋನಿ, 31ನೇ ವಾರ್ಡ್, 9ನೇ ಕ್ರಾಸ್, ಹೊಸಪೇಟೆ, ಬಳ್ಳಾರಿ ಜಿಲ್ಲೆ. | **ವಿರುದ್ಧ** | 1) ಸಹಾಯಕ ಕಾರ್ಯಪಾಲಕ ಅಭಿಯಂತರರು, ಪಂಚಾಯತ್‌ರಾಜ್, ಇಂಜಿನಿಯರಿಂಗ್ ಸಬ್ ಡಿವಿಜನ್, ಹರಪನಹಳ್ಳಿ, ದಾವಣಗೆರೆ ಜಿಲ್ಲೆ. |

**ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಯಪಡಿಸುವುದೇನೆಂದರೆ, ಮೇಲ್ಕಂಡ ಅರ್ಜಿದಾರರು ಈ ಪ್ರಾಧಿಕಾರದ ನ್ಯಾಯಾಲಯದಲ್ಲಿ ದಿನಾಂಕ:06.07.2009 ರಂದು ಉಪಧನ ಪಾವತಿ ಕಾಯ್ದೆ–1972 ಹಾಗೂ ಅದರಡಿಯ ಕರ್ನಾಟಕ ನಿಯಮಾವಳಿಗಳು–1973 ರಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಸದರಿ ಅರ್ಜಿಯಲ್ಲಿ ತಮ್ಮ ಪತಿ, ಲೇ: ಗಗನ್‌ಬಹುದ್ದೂರ್ ಬಿನ್ ರಾಮಬಹುದ್ದೂರ್ ಇವರು ಮೇಲ್ಕಂಡ ಪ್ರತಿವಾದಿ ಸಂಸ್ಥೆಯಲ್ಲಿ 15 ವರ್ಷಗಳ ಸೇವೆ ಸಲ್ಲಿಸಿದ್ದು, ನಂತರದಲ್ಲಿ ದಿನಾಂಕ:01.01.2001 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ಪ್ರಕಾರ ಬರಬೇಕಾದ ಉಪಧನವನ್ನು ಕೊಡಿಸಿಕೊಡಬೇಕೆಂದು ಪ್ರಾರ್ಥಿಸಿರುತ್ತಾರೆ.

ಸದರಿ ಪ್ರಕರಣದ ವಿಚಾರಣೆಯು ಈ ನ್ಯಾಯಾಲಯದಲ್ಲಿ ಪ್ರಸಕ್ತದಲ್ಲಿ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ, ಮೇಲೆ ಸೂಚಿಸಿರುವ ಪ್ರಕರಣದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ, ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು/ ಜೀವಂತ ಕುಟುಂಬ ಸದಸ್ಯರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ, ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ ಮೂವತ್ತು (30) ದಿನಗಳೊಳಗಾಗಿ ತಮ್ಮ ಲಿಖಿತ ಆಕ್ಷೇಪಣೆಗಳನ್ನು, ಸಕ್ಷಮ ಪ್ರಾಧಿಕಾರದಿಂದ ಪಡೆದ ಸೂಕ್ತ ಮೂಲ ದಾಖಲೆಗಳು ಹಾಗೂ ಇತರೆ ಸಾಕ್ಷ್ಯಾಧಾರಗಳೊಂದಿಗೆ, ಈ ಪ್ರಾಧಿಕಾರದ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಈ ರಾಜ್ಯಪತ್ರದಲ್ಲಿ ವಿಧಿಸಿರುವ ಮೇಲ್ಕಂಡ ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲವೆಂದು ಈ ಮೂಲಕ ಸ್ಪಷ್ಟಪಡಿಸಲಾಗಿದೆ.

**ಡಾ: ಶ್ರೀಪಾದ್ ಎಸ್.ಬಿ.**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಉಪಧನ
ಪಾವತಿ ಕಾಯ್ದೆ, ನಿಯಂತ್ರಣಾಧಿಕಾರಿಗಳು,
ಬಳ್ಳಾರಿ ವಿಭಾಗ, ದಾವಣಗೆರೆ.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ**

**ಸಂಖ್ಯೆ:ಎಎಲ್‌ಸಿಡಿ/ಪಿಜಿಎ/ಸಿ.ಆರ್–13/2009,**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) ರೇಣುಕಮ್ಮ ಕೋಂ ಜೆ. ಫಕೀರಪ್ಪ, 12ನೇ ವಾರ್ಡ್, ಕುರುಬರಗೇರಿ, ಹರಪನಹಳ್ಳಿ, ದಾವಣಗೆರೆ ಜಿಲ್ಲೆ. | **ವಿರುದ್ಧ** | 1) ಸಹಾಯಕ ಕಾರ್ಯಪಾಲಕ ಅಭಿಯಂತರರು, ಪಂಚಾಯತ್‌ರಾಜ್, ಇಂಜಿನಿಯರಿಂಗ್ ಸಬ್ ಡಿವಿಜನ್, ಹರಪನಹಳ್ಳಿ, ದಾವಣಗೆರೆ ಜಿಲ್ಲೆ. |

**ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಯಪಡಿಸುವುದೇನೆಂದರೆ, ಮೇಲ್ಕಂಡ ಅರ್ಜಿದಾರರು ಈ ಪ್ರಾಧಿಕಾರದ ನ್ಯಾಯಾಲಯದಲ್ಲಿ ದಿನಾಂಕ:16.07.2009 ರಂದು ಉಪಧನ ಪಾವತಿ ಕಾಯ್ದೆ–1972 ಹಾಗೂ ಅದರಡಿಯ ಕರ್ನಾಟಕ ನಿಯಮಾವಳಿಗಳು–1973 ರಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಸದರಿ ಅರ್ಜಿಯಲ್ಲಿ ತಮ್ಮ ಪತಿ, ಲೇ: ಫಕೀರಪ್ಪ ಬಿನ್ ಹನುಮಪ್ಪ, ಇವರು ಮೇಲ್ಕಂಡ ಪ್ರತಿವಾದಿ ಸಂಸ್ಥೆಯಲ್ಲಿ 11 ವರ್ಷಗಳ ಸೇವೆ ಸಲ್ಲಿಸಿದ್ದು, ನಂತರದಲ್ಲಿ ದಿನಾಂಕ:05.11.1998 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ಪ್ರಕಾರ ಬರಬೇಕಾದ ಉಪಧನವನ್ನು ಕೊಡಿಸಿಕೊಡಬೇಕೆಂದು ಪ್ರಾರ್ಥಿಸಿರುತ್ತಾರೆ.

ಸದರಿ ಪ್ರಕರಣದ ವಿಚಾರಣೆಯು ಈ ನ್ಯಾಯಾಲಯದಲ್ಲಿ ಪ್ರಸಕ್ತದಲ್ಲಿ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ, ಮೇಲೆ ಸೂಚಿಸಿರುವ ಪ್ರಕರಣದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ, ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು/ ಜೀವಂತ ಕುಟುಂಬ ಸದಸ್ಯರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ, ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ ಮೂವತ್ತು (30) ದಿನಗಳೊಳಗಾಗಿ ತಮ್ಮ

ಲಿಖಿತ ಆಕ್ಷೇಪಣೆಗಳನ್ನು, ಸಕ್ಷಮ ಪ್ರಾಧಿಕಾರದಿಂದ ಪಡೆದ ಸೂಕ್ತ ಮೂಲ ದಾಖಲೆಗಳು ಹಾಗೂ ಇತರೆ ಸಾಕ್ಷ್ಯಾಧಾರಗಳೊಂದಿಗೆ, ಈ ಪ್ರಾಧಿಕಾರದ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಈ ರಾಜ್ಯಪತ್ರದಲ್ಲಿ ವಿಧಿಸಿರುವ ಮೇಲ್ಕಂಡ ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲವೆಂದು ಈ ಮೂಲಕ ಸ್ಪಷ್ಟಪಡಿಸಲಾಗಿದೆ.

**ಡಾ: ಶ್ರೀಪಾದ್ ಎಸ್.ಬಿ.**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಉಪಧನ
ಪಿ.ಆರ್.754 ಪಾವತಿ ಕಾಯ್ದೆ, ನಿಯಂತ್ರಣಾಧಿಕಾರಿಗಳು,
ಬಳ್ಳಾರಿ ವಿಭಾಗ, ದಾವಣಗೆರೆ.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–2, ಬೆಂದೂರ್‌ವೆಲ್ ವೃತ್ತ, ಕಂಕನಾಡಿ, ಮಂಗಳೂರು–2, ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್–23/2009 ಎಫ್, ದಿನಾಂಕ:13ನೇ ಆಗಸ್ಟ್, 2009**

**ಅರ್ಜಿದಾರರು:**

1) ಒಬಯ್ಯ ಪುರುಷ ಅಲಿಯಾಸ್ ಒಬಯ್ಯ ಜೋಗಿ, ಮೃತ ಅಣ್ಣು ಪುರುಷರವರ ಮಗ, ಪ್ರಾಯ 60 ವರ್ಷ.
2) ಶ್ರೀಮತಿ ಸುಮತಿ, 53 ವರ್ಷ.
3) ಶ್ರೀ ಸುರೇಶ, 27 ವರ್ಷ.
ಡೋರ್ ನಂ.1–242, ಬಿಕ್ರೊಟ್ಟು ಹೌಸ್, ಅನಂತಾಡಿ ವಿಲೇಜ್ ಮತ್ತು ಅಂಚೆ, ಬಂಟ್ವಾಳ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:**

1) ಶ್ರೀ ಯಶೋಧರ ಶೆಟ್ಟಿ, ಮೃತ ಪದ್ಮನಾಭ ಶೆಟ್ಟಿಯವರ ಮಗ, ಬೊಳ್ಳಾರ ಹೌಸ್, ಕಾಡೇಶಿವಲಯ ವಿಲೇಜ್ ಮತ್ತು ಅಂಚೆ, ಬಂಟ್ವಾಳ ತಾಲ್ಲೂಕು.
2) ದಿ ಬ್ರಾಂಚ್ ಮ್ಯಾನೇಜರ್, ನ್ಯಾಷನಲ್ ಇನ್ಸೂರೆನ್ಸ್ ಕಂಪನಿ ಲಿ., 3ನೇ ಮಹಡಿ, ಗಣೇಶ್ ಬಿಲ್ಡಿಂಗ್, ಬಿ.ಸಿ.ರೋಡ್, ಬಂಟ್ವಾಳ ತಾಲ್ಲೂಕು.

### ಅಧಿಸೂಚನೆ

ಅರ್ಜಿದಾರರಾದ ಶ್ರೀ ಒಬಯ್ಯ ಪುರುಷ ಅಲಿಯಾಸ್ ಒಬಯ್ಯ ಜೋಗಿ ಇವರು ತಮ್ಮ ಮಗನಾದ ಶ್ರೀ ಅಶೋಕ ಪುರುಷ ಅಲಿಯಾಸ್ ಅಶೋಕ ಜೋಗಿ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:23.05.2009 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**
ಪಿ.ಆರ್.781 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ಗರು, ದಕ್ಷಿಣ ಕನ್ನಡ, ಉಪವಿಭಾಗ–2, ಮಂಗಳೂರು.

## ಜಿಲ್ಲಾ ಪರಿಶಿಷ್ಟವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ

### ಪತ್ರಿಕಾ ಪ್ರಕಟಣೆ

**ನಂ.ಜಿಪವಕಅ:ಇಡಿ:ಸಿಆರ್–19:09–10, ದಿನಾಂಕ:10ನೇ ಆಗಸ್ಟ್, 2009**

**ವಿಷಯ:** ವಿದೇಶಿ ವಿಶ್ವವಿದ್ಯಾನಿಲಯಗಳಲ್ಲಿ ಉನ್ನತ ವ್ಯಾಸಂಗಕ್ಕೆ ಪ್ರವೇಶ ಪಡೆಯುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಧನಸಹಾಯ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ:239:ಪಕವಿ:2001(ಪಿ), ಬೆಂಗಳೂರು ದಿನಾಂಕ:16.12.2003.

2009–10ನೇ ಸಾಲಿನಲ್ಲಿ ವಿದೇಶಿ ವಿಶ್ವವಿದ್ಯಾನಿಲಯಗಳಲ್ಲಿ ಉನ್ನತ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಪರಿಶಿಷ್ಟವರ್ಗದ ಅರ್ಹ ಅಭ್ಯರ್ಥಿಗಳಿಂದ ಧನಸಹಾಯ ಮಂಜೂರಾತಿಗೆ ಈ ಕೆಳಕಂಡ ನಿಬಂಧನೆಗಳಿಗೆ ಅನುಗುಣವಾಗಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ನಿಗದಿತ ಅರ್ಜಿ ನಮೂನೆಗಳನ್ನು ಕಛೇರಿ ವೇಳೆಯಲ್ಲಿ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿ, ಜಿಲ್ಲಾಡಳಿತ ಭವನ, ಕೊಠಡಿ ಸಂಖ್ಯೆ:217 ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಇಲ್ಲಿ ಪಡೆಯಬಹುದು ಭರ್ತಿ ಮಾಡಿದ ಅರ್ಜಿಗಳನ್ನು ಈ ಕಛೇರಿಗೆ ಸಲ್ಲಿಸಲು ಕೋರಿದೆ.

**ನಿಬಂಧನೆಗಳು**

| | | |
|---|---|---|
| 1) | ವಿದ್ಯಾರ್ಹತೆ | ಪಿಹೆಚ್‌ಡಿ ಪದವಿ ಸ್ನಾತಕೋತ್ತರ ಪದವಿಯಲ್ಲಿ ಕನಿಷ್ಠ ಶೇ.60 ಅಂಕಗಳನ್ನು ಪಡೆದಿರಬೇಕು. |
| 2) | ಆದಾಯ | ಮಾಸಿಕ ಕುಟುಂಬ ಆದಾಯ ರೂ.12,000–ಮೀರಬಾರದು. |
| 3) | ವಯೋಮಿತಿ | ಅಭ್ಯರ್ಥಿಯು ದಾಖಲೆಯಾಗಿರುವ ಕೋರ್ಸ್ ಪ್ರಾರಂಭವಾಗುವ ದಿನಾಂಕಕ್ಕೆ 35 ವರ್ಷಗಳ ಒಳಗಿರಬೇಕು. |
| 4) | ನಿಗದಿಪಡಿಸಿರುವ ಧನಸಹಾಯ | ಗರಿಷ್ಠ ವಾರ್ಷಿಕ 3.50 ಲಕ್ಷಗಳು ಅಥವಾ ವ್ಯಾಸಂಗದ ಪೂರ್ಣ ಅವಧಿಗೆ ಗರಿಷ್ಠ ಮೊತ್ತ 10.00 ಲಕ್ಷ ಮಿತಿಯೊಳಗೆ ಮಂಜೂರು ಮಾಡಲಾಗುವುದು. ಇದಕ್ಕಿಂತ ಹೆಚ್ಚಿನ ವೆಚ್ಚವನ್ನು ಸಂಬಂಧಪಟ್ಟ ಅಭ್ಯರ್ಥಿಗಳು ಭರಿಸಬೇಕಾಗುತ್ತದೆ. ಈ ಮೊತ್ತದಲ್ಲಿ ವಿಮಾನ ಪ್ರಯಾಣದ ವೆಚ್ಚವೂ ಸೇರಿರುತ್ತದೆ. |
| 5) | ಕೋರ್ಸ್ ಅವಧಿ | ಸಂಬಂಧಪಟ್ಟ ವಿದೇಶಿ ವಿ.ನಿಲಯದವರು ನಿಗದಿಪಡಿಸಿದ ಅವಧಿಗೆ ಅನುಸಾರ ಅಥವಾ ಗರಿಷ್ಠ ಮೂರು ವರ್ಷ. |
| 6) | ಅರ್ಜಿ ಫಾರಂ ಕೊಡುವ ಸ್ವೀಕರಿಸುವ ಸ್ಥಳ | ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿ, ಜಿಲ್ಲಾಡಳಿತ ಭವನ, ಕೊಠಡಿ ಸಂ:217, ಚಾಮರಾಜನಗರ. |
| 7) | ಅರ್ಜಿ ಫಾರಂ ಸಲ್ಲಿಸುವ ಕೊನೆಯ ದಿನಾಂಕ: | 31.08.2009 |

ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿ,
ಪಿ.ಆರ್.797 ಚಾಮರಾಜನಗರ ಜಿಲ್ಲೆ, ಚಾಮರಾಜನಗರ.

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ**

**ಪತ್ರಿಕಾ ಪ್ರಕಟಣೆ**

**ಸಂಖ್ಯೆ: ಬಿಸಿಎಂ/ಅಕಾಪತ/ಸಿಆರ್–14/09–10, ದಿನಾಂಕ:13ನೇ ಆಗಸ್ಟ್, 2009**

**ವಿಷಯ:** 2009–10ನೇ ಸಾಲಿಗೆ ಮತೀಯ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ ಕಾನೂನು ಪಧವೀದರರಿಂದ ತರಬೇತಿಗಾಗಿ ಅರ್ಜಿ ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಸಕಇ/149/ ಬಿಇಟಿ/99, ದಿನಾಂಕ:02.09.2009.
2) ಸಕಇ/205/ಬಿಎಂಎಸ್/99/ ದಿನಾಂಕ:09.10.1999.
3) ಎಸ್‌ಡಬ್ಲ್ಯೂಎಲ್/60/ಎಸ್‌ಡಬ್ಲ್ಯೂ/12/ ದಿನಾಂಕ:02.11.1999.
4) ಮಾನ್ಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರ ಟಿಪ್ಪಣಿ ಆದೇಶ ದಿನಾಂಕ:18.06.2009.
5) ಈ ಕಛೇರಿಯ ಸಮಸಂಖ್ಯೆ ಪತ್ರಿಕಾ ಪ್ರಕಟಣೆ ದಿನಾಂಕ:23.06.2009.

ಶಿವಮೊಗ್ಗ ಜಿಲ್ಲಾವ್ಯಾಪ್ತಿಗೆ ಬರುವ ಅಲ್ಪಸಂಖ್ಯಾತರ ವರ್ಗಗಳಿಗೆ ಸೇರಿದ ಕಾನೂನು ಪದವೀಧರರಿಗೆ 2009–10ನೇ ಸಾಲಿನಲ್ಲಿ ಇಲಾಖಾ ವತಿಯಿಂದ ಕಾನೂನು ತರಬೇತಿ ಪಡೆಯುವ ಸಲುವಾಗಿ ತರಬೇತಿ ಆಯ್ಕೆಗಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಸ್ವೀಕರಿಸಲು, ದಿನಾಂಕ:25.07.2009 ಕೊನೆಯ ದಿನಾಂಕವೆಂದು ಗೊತ್ತುಪಡಿಸಿ, ಪ್ರಕಟಣೆ ನೀಡಲಾಗಿತ್ತು.

ಅರ್ಜಿ ಸ್ವೀಕರಿಸಲು ಕಡೆಯ ದಿನಾಂಕವನ್ನು 25.07.2009 ರಿಂದ 31.08.2009 ರವರೆಗೆ ವಿಸ್ತರಿಸಲಾಗಿದೆ. ಉಳಿದಂತೆ ಎಲ್ಲಾ ನಿಬಂಧನೆಗಳನ್ನು ದಿನಾಂಕ:25.07.2009ರ ಪ್ರಕಟಣೆಯಲ್ಲಿ ತಿಳಿಸಿರುವಂತೆ ಜಾರಿಯಲ್ಲಿರುತ್ತವೆ. ಹೆಚ್ಚಿನ ವಿವರಗಳಿಗೆ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ ಇವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು.

**ನಿಬಂಧನೆಗಳು**

1) ಅಭ್ಯರ್ಥಿಯು ಮತೀಯ ಅಲ್ಪಸಂಖ್ಯಾತರಾಗಿರಬೇಕು. (ಮುಸ್ಲಿಂ, ಜೈನ್, ಕ್ರಿಶ್ಚಿಯನ್, ಸಿಖ್, ಬೌದ್ಧಪಾರ್ಸಿ, ಹಾಗೂ ಆಂಗ್ಲೋ ಇಂಡಿಯನ್.

2) ಅರ್ಜಿಯನ್ನು ಸ್ವೀಕರಿಸಲು ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಅಡ್ವೋಕೇಟ್ ಆಗಿ ಕಾರ್ಯ ನಿರ್ವಹಿಸಲು ನಿಗದಿ ಪಡಿಸಲಾದ ಕಾನೂನು ಪರೀಕ್ಷೆಯಲ್ಲಿ ತೇರ್ಗಡೆಯಾಗಿ 2 ವರ್ಷಗಳ ಅವಧಿಯೊಳಗೆ ಇರುವವರು ಮಾತ್ರ ಅರ್ಜಿಯನ್ನು ಸಲ್ಲಿಸಬಹುದು.

3) ಕಾನೂನು ತರಬೇತಿ 4 ವರ್ಷ ಅವಧಿಯಾಗಿದ್ದು, ಮಾಸಿಕ ರೂ.1000–00 ಗಳನ್ನು ಶಿಷ್ಯವೇತನ ನೀಡಲಾಗುವುದು.

4) ಅಭ್ಯರ್ಥಿಯ ಗರಿಷ್ಠ ವಯೋಮಿತಿ 30 ವರ್ಷದೊಳಗಿರಬೇಕು.

5) ತರಬೇತಿಯ ಅವಧಿಯ ಮಧ್ಯಭಾಗದಲ್ಲಿ ತರಬೇತಿಗೆ ಗೈರುಹಾಜರಾದಲ್ಲಿ ಪಡೆಯಲಾಗಿರುವ ಶಿಷ್ಯವೇತನ ಹಣವನ್ನು ಬಡ್ಡಿಯೊಂದಿಗೆ ಹಿಂತಿರುಗಿಸಬೇಕಾಗುವುದು.

6) ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕ:31.08.2009.

7) ಅಪೂರ್ಣವಾದ ಹಾಗೂ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ಇಲ್ಲದೆ ತಿರಸ್ಕರಿಸಲಾಗುವುದು.

8) ಅಭ್ಯರ್ಥಿಯ ಕುಟುಂಬದ ವಾರ್ಷಿಕ ಆದಾಯವು ರೂ.15000–00ಕ್ಕೆ ಮೀರರಬಾರದು. ಪ್ರವರ್ಗ 1 ರಡಿಯಲ್ಲಿ ಬರುವ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಆದಾಯದ ಮಿತಿ ಇರುವುದಿಲ್ಲ.

9) ಅಭ್ಯರ್ಥಿಯು ತಮ್ಮ ಹೆಸರನ್ನು ಬಾರ್ ಕೌನ್ಸಿಲ್‌ನಲ್ಲಿ ನೋಂದಾಯಿಸಿರಬೇಕು.

10) ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರ ಅಧೀನದಲ್ಲಿ ತರಬೇತಿ ಪಡೆಯುವುದು.

11) ಆಯ್ಕೆಯ ಅನುದಾನದ ಲಭ್ಯತೆಯ ಮೇಲೆ ಅವಲಂಬಿಸಿರುವುದರಿಂದ ಷರತ್ತಿಗೊಳಪಟ್ಟಿರುತ್ತದೆ.

ಹೆಚ್ಚಿನ ವಿವರಗಳಿಗಾಗಿ ಹಾಗೂ ಅರ್ಜಿ ನಮೂನೆಯನ್ನು ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ರವೀಂದ್ರನಗರ, 100 ಅಡಿ ರಸ್ತೆ, ಶಿವಮೊಗ್ಗ ಜಿಲ್ಲಾ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ಜಿಲ್ಲಾ ಅಧಿಕಾರಿಗಳು,

ಪಿ.ಆರ್.800 ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ.

**ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ**

**ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳ ಕಾರ್ಯಾಲಯ, ರಾಯಚೂರು**

**ಪ್ರಕಟಣೆ**

**ಸಂಖ್ಯೆ: ಜಿಪವಕಅರಾ/ಪವ1/ಕಾಪತ/ಸಿಆರ್–7/2009–10/1139, ದಿನಾಂಕ:12ನೇ ಆಗಸ್ಟ್, 2009**

**ವಿಷಯ:** 2009–10ನೇ ಸಾಲಿನಲ್ಲಿ ಕಾನೂನು ಪದವೀಧರರನ್ನು ಆಡಳಿತ ನ್ಯಾಯಾಧೀಕರಣ ತರಬೇತಿಗಾಗಿ ಆಯ್ಕೆ ಮಾಡುವ ಕುರಿತು.

**ಉಲ್ಲೇಖ:**ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಎಲ್ 68:ಎಸ್‌ಇಡಬ್ಲ್ಯೂ:89: ಬೆಂಗಳೂರು ದಿನಾಂಕ:02.11.1990ರ ಪ್ರಕಾರ.

ಕರ್ನಾಟಕ ಸರ್ಕಾರದ ಆದೇಶದ ಪ್ರಕಾರ 2009–10ನೇ ಸಾಲಿಗೆ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣ ತರಬೇತಿ ನೀಡುವ ಕಾರ್ಯಕ್ರಮವಿರುತ್ತದೆ. ಆದಕಾರಣ ಅರ್ಹ ಪರಿಶಿಷ್ಟ ವರ್ಗದ ಕಾನೂನು ಪದವೀಧರರು ದಿನಾಂಕ:22.08.2009ರೊಳಗಾಗಿ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿಗಳು ರಾಯಚೂರುರವರ ಕಾರ್ಯಾಲಯಕ್ಕೆ ಈ ಕೆಳಗೆ ಕಾಣಿಸಿದ ದಾಖಲೆಗಳೊಂದಿಗೆ ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸಲು ತಿಳಿಸಲಾಗಿದೆ. ಅರ್ಜಿಯ ನಮೂನೆಯನ್ನು ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿಗಳು ರಾಯಚೂರುರವರ ಕಛೇರಿಯ ವೇಳೆಯಲ್ಲಿ ಉಚಿತವಾಗಿ ಪಡೆಯಬಹುದು. ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿಗಳು, ರಾಯಚೂರುರವರ ಕಛೇರಿಯನ್ನು ಸಂಪರ್ಕಿಸಿ ವಿವರಗಳನ್ನು ಪಡೆಯತಕ್ಕದ್ದು.

1) ಅರ್ಜಿದಾರರು ಪರಿಶಿಷ್ಟ ವರ್ಗದವರಾಗಿರಬೇಕು.

2) ಅರ್ಜಿಯ ಜೊತೆಗೆ ತಹಸೀಲ್ದಾರರಿಂದ ಪಡೆದ ಜಾತಿ ಪ್ರಮಾಣ ಪತ್ರ ದೃಢೀಕೃತ ಜೆರಾಕ್ಸ್ ಪ್ರತಿ ಲಗತ್ತಿಸಬೇಕು.

3) ಅರ್ಜಿಯ ಜೊತೆಗೆ ತಹಸೀಲ್ದಾರರಿಂದ ಪಡೆದ ಆದಾಯ ಪ್ರಮಾಣ ಪತ್ರ ದೃಢೀಕೃತ ಜೆರಾಕ್ಸ್ ಪ್ರತಿ ಲಗತ್ತಿಸಬೇಕು.

4) ಕಾನೂನು ತರಬೇತಿಯು ರಾಯಚೂರು ಜಿಲ್ಲೆಗೆ ಮಾತ್ರ ಸೀಮಿತವಾಗಿದ್ದು, ತರಬೇತಿಯನ್ನು ರಾಯಚೂರು ಜಿಲ್ಲೆಯಲ್ಲಿ ಕೊಡಲಾಗುವುದು.

5) ತರಬೇತಿಯ ಅವಧಿಯು ನಾಲ್ಕು ವರ್ಷವಿದ್ದು, ಈ ಅವಧಿಯಲ್ಲಿ ಪ್ರತಿ ತಿಂಗಳಿಗೆ ರೂ.1,000/– ರಂತೆ ಶಿಷ್ಯವೇತನ ಕೊಡಲಾಗುವುದು. ತರಬೇತಿಯನ್ನು ಮಧ್ಯದಲ್ಲಿ ಬಿಟ್ಟ ಪಕ್ಷದಲ್ಲಿ ಅಲ್ಲಿಯವರೆಗೆ ಪಾವತಿಸಿದ ಶಿಷ್ಯವೇತನವನ್ನು ಭೂ ಕಂದಾಯ ರೂಪದಲ್ಲಿ ಕಾನೂನಿನ ಪ್ರಕಾರ ವಸೂಲು ಮಾಡಿ ಸರ್ಕಾರಕ್ಕೆ ಕಟ್ಟಬೇಕಾಗಿರುತ್ತದೆ.

6) ದಿನಾಂಕ:22.08.2009ಕ್ಕೆ ತರಬೇತಿ ಪಡೆಯುವ ಅರ್ಜಿದಾರರ ವಯಸ್ಸು 35ಕ್ಕೆ ಮೀರಿರಬಾರದು.

7) ದಿನಾಂಕ:22.08.2009ರ ಮೊದಲು 2 ವರ್ಷಗಳೊಳಗೆ ಕಾನೂನು ಪದವಿಯನ್ನು ಪಾಸಾದ ಅಭ್ಯರ್ಥಿಗಳು ಮಾತ್ರ ಅರ್ಜಿಗಳನ್ನು ಹಾಕತಕ್ಕದ್ದು. ಕಾನೂನು ಪದವಿಯಲ್ಲಿ ಪಾಸಾದ ಅಭ್ಯರ್ಥಿಗಳು ಎಲ್ಲಾ ಮೂಲ ದಾಖಲೆಯ ನಕಲು ಪ್ರತಿಗಳಿಗೆ ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

8) ತರಬೇತಿಗೆ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯಲ್ಲಿ ಸಂದರ್ಶನ ಮುಖಾಂತರ ಆಯ್ಕೆ ಮಾಡಲಾಗುತ್ತದೆ.

ಅಪೂರ್ಣ ಹಾಗೂ ಅವಧಿ ಮೀರಿ ಬಂದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.

ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು,
ರಾಯಚೂರು.

ಪಿ.ಆರ್.801

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ರಾಯಚೂರು

## ಪ್ರಕಟಣೆ

**ಸಂಖ್ಯೆ: ಜಿಸಕಅರಾ:8:ಕಾಪತ:ಸಿಆರ್–27/2009–10/1133, ದಿನಾಂಕ:10ನೇ ಆಗಸ್ಟ್, 2009**

**ವಿಷಯ:** 2009–10ನೇ ಸಾಲಿನಲ್ಲಿ ಕಾನೂನು ಪದವೀಧರರನ್ನು ಆಡಳಿತ ನ್ಯಾಯಾಧೀಕರಣ ತರಬೇತಿಗಾಗಿ ಆಯ್ಕೆ ಮಾಡುವ ಕುರಿತು.

**ಉಲ್ಲೇಖ:**1) ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಎಲ್–68:ಎಸ್‌ಡಬ್ಲ್ಯೂ89: ಬೆಂಗಳೂರು, ದಿನಾಂಕ:02.11.1990ರ ಪ್ರಕಾರ.

2) ಸರ್ಕಾರಿ ಆದೇಶ ಸಂಖ್ಯೆ: ಸಕಿ:349:ಪಕವಿ:2005, ಬೆಂಗಳೂರು, ದಿನಾಂಕ:28.01.2006.

ಕರ್ನಾಟಕ ಸರ್ಕಾರದ ಆದೇಶದ ಪ್ರಕಾರ 2009–10ನೇ ಸಾಲಿಗೆ ಪರಿಶಿಷ್ಟ ಜಾತಿಯ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣ ತರಬೇತಿ ನೀಡುವ ಕಾರ್ಯಕ್ರಮವಿರುತ್ತದೆ. ಆದಕಾರಣ ಅರ್ಹ ಪರಿಶಿಷ್ಟ ಜಾತಿಯ ಕಾನೂನು ಪದವೀಧರರು ದಿನಾಂಕ:26.08.2009ರೊಳಗಾಗಿ ಜಿಲ್ಲಾ ಸಮಾಜ ಕಲ್ಯಾಣಾದಿಕಾರಿಗಳು, ರಾಯಚೂರುರವರ ಕಾರ್ಯಾಲಯಕ್ಕೆ ಈ ಕೆಳಗೆ ಕಾಣಿಸಿದ ದಾಖಲೆಗಳೊಂದಿಗೆ ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸಲು ತಿಳಿಸಲಾಗಿದೆ. ಅರ್ಜಿಯ ನಮೂನೆಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ರಾಯಚೂರುರವರ ಕಛೇರಿಯ ವೇಳೆಯಲ್ಲಿ ಉಚಿತವಾಗಿ ಪಡೆಯಬಹುದು. ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ರಾಯಚೂರುರವರ ಕಛೇರಿಯಲ್ಲಿ ಸಂಪರ್ಕಿಸಿ ವಿವರಗಳನ್ನು ಪಡೆಯತಕ್ಕದ್ದು.

1) ಅರ್ಜಿದಾರರು ಪರಿಶಿಷ್ಟ ಜಾತಿಯವರಾಗಿರಬೇಕು.

2) ಅರ್ಜಿಯ ಜೊತೆಗೆ ತಹಸೀಲ್ದಾರರಿಂದ ಪಡೆದ ಜಾತಿ ಪ್ರಮಾಣ ಪತ್ರದ ದೃಢೀಕೃತ ಜೆರಾಕ್ಸ್ ಪ್ರತಿ ಲಗತ್ತಿಸಬೇಕು.

3) ಅರ್ಜಿಯ ಜೊತೆಗೆ ತಹಸೀಲ್ದಾರರಿಂದ ಪಡೆದ ಆದಾಯ ಪ್ರಮಾಣ ಪತ್ರದ ದೃಢೀಕೃತ ಜೆರಾಕ್ಸ್ ಪ್ರತಿ ಲಗತ್ತಿಸಬೇಕು.

4) ಕಾನೂನು ತರಬೇತಿಯು ರಾಯಚೂರು ಜಿಲ್ಲೆಗೆ ಮಾತ್ರ ಸೀಮಿತವಾಗಿದ್ದು, ತರಬೇತಿಯನ್ನು ರಾಯಚೂರು ಜಿಲ್ಲೆಯಲ್ಲಿ ಕೊಡಲಾಗುವುದು.

5) ತರಬೇತಿಯ ಅವಧಿಯು ನಾಲ್ಕು ವರ್ಷವಿದ್ದು, ಈ ಅವಧಿಯಲ್ಲಿ ಪ್ರತಿ ತಿಂಗಳಿಗೆ ರೂ.1,000/– ರಂತೆ ಶಿಷ್ಯವೇತನ ಕೊಡಲಾಗುವುದು. ತರಬೇತಿಯನ್ನು ಮಧ್ಯದಲ್ಲಿ ಬಿಟ್ಟ ಪಕ್ಷದಲ್ಲಿ ಅಲ್ಲಿಯವರೆಗೆ ಪಾವತಿಸಿದ ಶಿಷ್ಯವೇತನವನ್ನು ಭೂ ಕಂದಾಯ ರೂಪದಲ್ಲಿ ಕಾನೂನಿನ ಪ್ರಕಾರ ವಸೂಲು ಮಾಡಿ ಸರ್ಕಾರಕ್ಕೆ ವಾಪಸ್ಸು ಕಟ್ಟಬೇಕಾಗಿರುತ್ತದೆ.

6) ಅರ್ಜಿಗಳನ್ನು ದಿನಾಂಕ:26.08.2009ಕ್ಕೆ ರೊಳಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ರಾಯಚೂರು ರವರಿಗೆ ಸಲ್ಲಿಸತಕ್ಕದ್ದು.

7) ಜೂನ್–2009ಕ್ಕೆ ತರಬೇತಿ ಅರ್ಜಿದಾರರ ವಯಸ್ಸು 35ಕ್ಕೆ ಮೀರಿರಬಾರದು.

8) ದಿನಾಂಕ:ಜೂನ್–2009ರ ಒಳಗಾಗಿ 2 ವರ್ಷದೊಳಗೆ ಕಾನೂನು ಪದವಿಯನ್ನು ಪಾಸಾದ ಅಭ್ಯರ್ಥಿಗಳು ಮಾತ್ರ ಅರ್ಜಿಗಳನ್ನು ಹಾಕತಕ್ಕದ್ದು. ಕಾನೂನು ಪದವಿಯಲ್ಲಿ ಪಾಸಾದ ಅಭ್ಯರ್ಥಿಗಳು ಎಲ್ಲಾ ಮೂಲ ದಾಖಲೆಯ ನಕಲು ಪ್ರತಿಗಳಿಗೆ ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

9) ತರಬೇತಿಗೆ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯಲ್ಲಿ ಸಂದರ್ಶನ ಮುಖಾಂತರ ಆಯ್ಕೆ ಮಾಡಲಾಗುತ್ತದೆ.

ಅಪೂರ್ಣ ಹಾಗೂ ಅವಧಿ ಮೀರಿ ಬಂದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು,
ರಾಯಚೂರು.

**ಅನುಬಂಧ–11ರ ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್–68:ಎಸ್‌ಇಡಬ್ಲ್ಯೂ:89: ದಿನಾಂಕ:02.11.1990 ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ ಆಡಳಿತದಲ್ಲಿ ನ್ಯಾಯಾಧೀಕರಣ ತರಬೇತಿ ನೀಡುವ ಬಗ್ಗೆ:**

ಕಾರ್ಯದರ್ಶಿಗಳು,
ಜಿಲ್ಲಾ ಮಟ್ಟದಲ್ಲಿ ಕಾನೂನು ಪದವೀಧರರನ್ನು ಆಡಳಿತ
ನ್ಯಾಯಾಧೀಕರಣದಲ್ಲಿ ಆಯ್ಕೆ ಮಾಡುವ ಆಯ್ಕೆ ಸಮಿತಿ, ರಾಯಚೂರು.

ಭಾವಚಿತ್ರ ಲಗತ್ತಿಸಬೇಕು

ಮಾನ್ಯರೆ,

ನಿಮ್ಮ ಪತ್ರಿಕಾ ಪ್ರಕಟಣೆ ಜಾಹೀರಾತು__________ ಕರ್ನಾಟಕ ಗೆಜೆಟ್ ದಿನಾಂಕ:________ರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡುವ ಅರ್ಜಿ ಆಹ್ವಾನಿಸಿದಂತೆ ನಾನು ಸದರಿ ತರಬೇತಿಯನ್ನು ಪಡೆಯಲು ಅರ್ಜಿಯನ್ನು ದ್ವಿಪ್ರತಿಯಲ್ಲಿ ಈ ಕೆಳಕಂಡಂತೆ ಮಾಹಿತಿಯನ್ನು ಸಲ್ಲಿಸುತ್ತೇನೆ. ಹಾಗೂ ಸಲ್ಲಿಸಿರುವ ಮಾಹಿತಿಯು ಸತ್ಯವೆಂದು ದೃಢೀಕರಿಸುತ್ತೇನೆ.

ಸ್ಥಳ: ತಮ್ಮ ನಂಬುಗೆಯ
ದಿನಾಂಕ: ಅರ್ಜಿದಾರರ ಸಹಿ

**: ಅರ್ಜಿ ನಮೂನೆ :**

| | | | |
|---|---|---|---|
| 1) | ಅಭ್ಯರ್ಥಿಯ ಹೆಸರು (ಬಿಡಿ ಅಕ್ಷರದಲ್ಲಿ) | : | |
| 2) | ವಿಳಾಸ (ಬಿಡಿ ಅಕ್ಷರದಲ್ಲಿ) | : | |
| 3) | ತಂದೆ: ಪೋಷಕರ: ಹೆಸರು ವಿಳಾಸ ಮತ್ತು ವೃತ್ತಿ | : | |
| 4) | ಹುಟ್ಟಿದ ದಿನಾಂಕ (ಎಸ್.ಎಸ್.ಎಲ್.ಸಿ.) ಅಂಕಪಟ್ಟಿಯನ್ನು ದೃಢೀಕರಿಸಿ ಲಗತ್ತಿಸಬೇಕು | : | |
| 5) | ಎ) ಹುಟ್ಟಿದ ಸ್ಥಳ, ಜಿಲ್ಲೆ ಮತ್ತು ರಾಜ್ಯ | : | |
| | ಬಿ) ಈಗ ವಾಸಿಸುತ್ತಿರುವ ಜಿಲ್ಲೆ ಮತ್ತು ರಾಜ್ಯದ ಹೆಸರು | : | |
| 6) | ಎ) ನೀವು ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಇತರೆ ಹಿಂದುಳಿದ ವರ್ಗಕ್ಕೆ ಸೇರಿದಲ್ಲಿ ಜಾತಿ ಬಗ್ಗೆ ನಮೂದಿಸುವುದು | : | |
| | ಬಿ) ಮೇಲೆ ತಿಳಿಸಿದ ವಿಷಯದಲ್ಲಿ ಹೌದು ಅಂದಿದ್ದಲ್ಲಿ ಸಕ್ಷಮ ಪ್ರಾಧಿಕಾರಿಗಳಿಂದ ಅಂಗೀಕೃತ ಜಾತಿ ಪ್ರಮಾಣ ಪತ್ರವನ್ನು ದೃಢೀಕರಿಸಿ ಲಗತ್ತಿಸಬೇಕು. | : | |
| ಬಿ–2 | ಆದಾಯ ಪ್ರಮಾಣ ಪತ್ರ ಲಗತ್ತಿಸಿದಲ್ಲಿ ಈ ಕೆಳಕಂಡ ವಿವರಗಳನ್ನು ಸಲ್ಲಿಸುವುದು. | : | |
| | 1) ಅರ್ಜಿದಾರರ ಆದಾಯ | : | |
| | 2) ವೃತ್ತಿಯಿಂದ ಬಂದಂತಹ ಆದಾಯ ಅಥವಾ ವೇತನ. | : | |
| | 3) ಇನ್ನಿತರ ವೇತನ | : | |
| ಬಿ–3 | ತಂದೆ:ತಾಯಿಗಳ ಆದಾಯ | : | |
| | 1) ಉದ್ಯೋಗ ಅಥವಾ ನಿವೃತ್ತಿ ವೇತನದಿಂದ ಬಂದಂತಹ ಆದಾಯ. | : | |
| | 2) ಜಮೀನು ಅಥವಾ ಕಟ್ಟಡಗಳಿಂದ ಬಂದಂತಹ ಆದಾಯ. | : | |
| | 3) ಇನ್ನಿತರೆ ವೇತನದಿಂದ ಬಂದಂತಹ ಆದಾಯ. | : | |

| | | |
|---|---|---|
| 6–3 | ಗಂಡ: ಹೆಂಡತಿಯ ಆದಾಯ<br>1) ವೃತ್ತಿ ಮತ್ತು ವೇತನದಿಂದ ಬಂದಂತಹ ಆದಾಯ.<br>2) ಇನ್ನಿತರೆ ಆದಾಯ | :<br>: |
| 7) | ಅ) ಗಂಡು: ಹೆಣ್ಣು<br>ಆ) ಮದುವೆಯಾಗಿದೆಯೇ? ಇಲ್ಲವೇ?<br>ಇ) ಮದುವೆಯಾಗಿದ್ದಲ್ಲಿ ಒಂದಕ್ಕಿಂತ ಹೆಚ್ಚು ನಿಮಗೆ ಪತ್ನಿಯರಿದ್ದಾರೆಯೇ.<br>ಈ) ಈಗಾಗಲೇ ಪತ್ನಿಯನ್ನು ಹೊಂದಿದ್ದು ಇನ್ನೊಬ್ಬರನ್ನು ಮದುವೆಯಾಗಿದ್ದೀರ? | :<br>:<br>:<br>: |
| 1) | ಕಾಲಂ ರಲ್ಲಿಯ ಮಾಹಿತಿಯ ದೃಢೀಕರಣವಾಗಿ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಹುಟ್ಟಿದ ದಿನಾಂಕವನ್ನು ನಮೂದಿಸಿದ ಅಂಕಪಟ್ಟಿಯನ್ನು ಲಗತ್ತಿಸುವುದು. | : |
| 2) | ಕಾಲಂ ಸಂಖ್ಯೆ (8) (ಬಿ) ತಿಳಿಸಿರುವ ವಿದ್ಯಾರ್ಹತೆ ಬಗ್ಗೆ ಅಂಕಪಟ್ಟಿಯನ್ನು ದೃಢೀಕರಿಸಿ ಲಗತ್ತಿಸುವದು. | : |
| 3) | ಕಾಲಂ ನಂ–8 (ಸಿ) ಯಲ್ಲಿ ತಿಳಿಸಿರುವಂತೆ ಹೆಚ್ಚಿನ ವಿದ್ಯಾರ್ಹತೆಯ ಬಗ್ಗೆ ಪ್ರಮಾಣ ಪತ್ರಗಳನ್ನು ದೃಢೀಕರಿಸಿ ಲಗತ್ತಿಸಬೇಕು. | : |
| 4) | ಕಾಲಂ ಸಂಖ್ಯೆ–10 ರಲ್ಲಿ ತಿಳಿಸಿರುವಂತೆ ಸೇವೆಯ ಅವಧಿಯ ಬಗ್ಗೆ ದೃಢೀಕರಣ ಪ್ರಮಾಣ ಪತ್ರವನ್ನು ಲಗತ್ತಿಸುವದು. | : |

ನಾನು ಈ ಮೇಲೆ ಒದಗಿಸಿರುವ ಮಾಹಿತಿಯನ್ನು ಸತ್ಯವೆಂದು ದೃಢೀಕರಿಸುತ್ತೇನೆ. ನಾನು ಈ ನಾಲ್ಕು ವರ್ಷಗಳ ತರಬೇತಿಯನ್ನು ಪೂರ್ಣಗೊಳಿಸುತ್ತೇನೆಂದು ತಿಳಿಸುತ್ತೇನೆ.

ಸ್ಥಳ:

ದಿನಾಂಕ: ಅಭ್ಯರ್ಥಿಯ ಸಹಿ

ಪಿ.ಆರ್.802

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE**

**Present:** Sri Pradeep Singh Kharola, IAS,
Commissioner of Commercial Taxes.

**Sub:** KTEG Act, 1979-Issue of clarification on rate of tax on cutting tools-reg.

**Ref:** Application under Section 12(7) of the KTEG Act, 1979 filed by M/s. Addison & Co., Limited, Bangalore, Dated:24.03.2009.

**Preamble:**

The applicant M/s. Addison & Co.Limited, 3rd Floor, Tower Block, Unity Building, J.C.Road, Bangalore-560 002 is a dealer registered under the KTEG Act, 1979 engaged in the business of sale of cutting tools of different types and size. It has sought clarification on the rate of tax on cutting tools such as twist drills, taps, reamers, cutters, etc. by filing an application under Section 12(7) of the KTEG Act, 1979, enclosing several documents relating to the commodity and explaining its understanding on the rate of tax under the KTEG Act on the said goods. The applicant is of the view that cutting tools sold by it are in the nature of consumables which get worn out quickly and require to be replaced very frequently and

they cannot be considered as either parts or accessories of machinery falling under entry 52 of the First Schedule to the KTEG Act and hence they are not liable to entry tax.

2. Sri D. Venkatesh, Advocate, duly authorized by the applicant appeared before the undersigned and submitted arguments in support of the view taken by the applicant. The learned advocate prayed for issue of clarification holding that cutting tools dealt by the applicant are not parts and accessories of machinery and hence not liable to entry tax.

3. The arguments of the learned advocate, in brief, are as under:

(a) The cutting tools dealt by the dealer get worn out, exhausted very quickly and require frequent replacements unlike parts and accessories of machinery. The dealers dealing with these goods like manufacturers, traders and customers understand the goods as consumables, account the same as consumables in their books of account, and reflect accordingly in the statement of account. Thus, the understanding in the trade and commerce is that the goods are consumables and not accessories or part of machinery. Whereas the parts and accessories are capitalized in the accounts, the expenditure on consumables is shown as revenue expenditure. Several reputed organizations and industries including Government and Public Sector Undertakings have declared that they understand cutting tools as consumables and not parts or accessories of machinery. Consumables are different from parts and accessories. A few notifications issued under the KST Act, 1957 identify the cutting tools such as drill bits, drill rods, etc. as consumables.

(b) Entry 52 of the KTEG Act, 1979 refers to machinery (all kinds) and parts and accessories thereof excluding agricultural machinery. Since cutting tools are neither parts or accessories, they do not fall under this entry and accordingly they are not covered by notification No.FD 11 CET 2002, Dated:30.03.2002. These goods are therefore not liable to entry tax. The Commissioner of Commercial Taxes has earlier issued clarification stating that the cutting tools are not liable to entry tax.

4. The matter is examined.

(a) While disposing of an appeal filed disputing levy of tax on cutting tools, in its order Dated:13.08.2002 in KTEG/1258 & 1259/2001, the Karnataka Appellate Tribunal had held that cutting tools which require continuous replacement are consumables and not parts of machinery. However, the KAT in its order Dated:31.08.2005 in STA No.2375/2004 while disposing of a similar appeal in the case of M/s. Addison & Co. Limited for the assessment year 2000-01 took a different stand and held that the cutting tools are accessories of machinery and hence liable to tax under the KTEG Act. On a revision petition filed against this order of the KAT, the Hon'ble High Court in its order Dated:14.09.2007 in CRP No.457/2006 (T-KTEG), upheld the order of the KAT holding that cutting tools are accessories of machinery. On SLP filed against the order of High Court, the Hon'ble Supreme Court in its order in Civil Appeal No.1311/2009 arising out of SLP (C) No.5190/2008 Dated:26.02.2009 dismissed the appeal filed by the applicant, M/s. Addison & Co.Ltd., upholding the order of the High Court. It held that there is no infirmity in the impugned judgment of the High Court and Tribunal, which related to assessment year 2000-01. The Hon'ble Supreme Court further ordered as under:

> *"Be that as it may, we are of the view that it would be open to the assessee herein to raise the contention as to whether the subject tools are consumables and not accessories/ parts of machine in an appropriate case(s). The reason being that Authorities need to decide as to what distinuishes a consumable from an accessory. If the assessee raises such a contention as is raised before us in this Appeal, the authority shall consider the contention in accordance with law, uninfluenced by the observations made in the impugned judgment of the High*

*Court and the Tribunal in this case. We also make it clear that in such an event, it would be open to the assessee herein and to the Department to raise all such contentions which are necessary for deciding this dispute, including the contentions mentioned hereinabove."*

(b) The Hon'ble Supreme Court did not lay down the law in respect of cutting tools but left it open with a direction that if the assessee raises such a contention as is raised before the Supreme Court, the authorities shall consider the contention in accordance with law in respect of the issue as to whether cutting tools are consumables or accessories or parts of machinery. It observed that the authorities need to decide as to what distinguishes consumable from an accessory.

5. The undersigned is empowered under Section 12(7) of the KTEG Act, 1979 to clarify the rate of tax payable under the Act if he considers it necessary or expedient so to do for the purpose of maintaining uniformity in assessments and collection of revenue or for the removal of any doubt. It is considered that the clarification requested by the applicant is within the scope of the aforesaid provision and it is necessary that clarification be issued for the purpose of maintaining uniformity in the work of assessments and collection of revenue and also for removal of doubts.

6. In the notification No.FD 11 CET 2002 Dated:30.03.2002, Sl.No.7 of the table in the notification reads as under:

*7. Machinery of all kinds and parts and accessories thereof but excluding agricultural machinery - 2%*

If cutting tools are parts or accessories of machinery, then they become liable to tax in terms of the above notification. However, the applicant's contention is that cutting tools are consumables and they are therefore neither part nor accessory of any machinery.

7. Cutting tools are used as a fixture or fitting to a machinery in order to carry out the desired operation, viz., cutting, drilling a hole, etc. Without these tools, machinery cannot be used for the required purpose. No doubt, the cutting tools such as twist drills, taps, reamer, cutters, etc. wear out after numerous repeated use and require to be replaced. However, even other parts and accessories of machinery also require to be replaced after repeated use. It is not as if cutting tools are intended for single use and thereby get consumed after any such single use just like fuel which gets consumed in its use. The method of accounting the purchase of consumables or parts or accessories of machinery in the books of account of the applicant is not relevant for the purpose of classification of these goods under the KTEG Act, 1979. Similarly, if in any notification issued by the State Government under the KST Act, 1957 extending incentives and concessions to industries, drill bits and drill rods are treated as consumables, such treatment would not be relevant for the purpose of classification of these goods under the KTEG Act, 1979.

8. In the case of Annapurna Carbon Industries Co. Vs State of Andhra Pradesh, reported in 37 STC 378, the Hon'ble Supreme Court has held that are carbons used in projectors or other cinematographic equipments are their accessories. While delivering its judgment, the Hon'ble Supreme Court, referring to accessories, has observed as under:

*"We find that the term "accessories" is used in the schedule to describe goods which may have been manufactured for use as an aid or addition. A sense in which the word "accessory" is used is given in Webster's Third New International Dictionary as follows: "an object or device that is not essential in itself but that adds to the beauty, convenience, or effectiveness of something*

*else". Other meanings given there are: "supplementary or secondary to something of greater or primary importance",- "additional"; "any of several mechanical devices that assist in operating or controlling the tone resources of an organ". "Accessories" are not necessarily confined to particular machines for which they may serve as aids. The same item may be an accessory of more than one kind of instrument."*

9. The same view was held by the Hon'ble Supreme Court in the case of Union Carbide India Limited Vs State of Andhra Pradesh, reported in 98 STC 1. These decisions apply squarely to the issue under consideration. It is clear there-from that the Supreme Court did not hold 'are carbon' as consumable.

10. In the case of Pioneer Enterprises Vs Joint Commissioner of Commercial Taxes (Appeals) and another, reported in 134 STC 138, the Hon'ble High Court of Karnataka has held that when an item is used only for obtaining enhanced efficiency of performance of the main product and does not form part an essential integral part of the main product, it is an accessory. In the case of State of Uttar Pradesh and another Vs Kores (India) Limited, reported in 39 STC 08, the Hon'ble Supreme Court held that typewriter ribbon is an accessory and not a part of the typewriter. Ribbon of a typewriter wears out frequently and is not sold along with a typewriter. It is not an essential and integral part of the typewriter. But, the typewriter cannot work without a ribbon. In other words, ribbon aids the typewriter in its functioning. Under these circumstances, the Hon'ble Supreme Court held that it is an accessory. The position of ribbon in a typewriter is similar to a cutting tool in a machinery.

11. The applicant has furnished a few declarations and certificates issued by certain industries declaring that cutting tools are considered by them as consumables. Apparently, such classification is for the purpose of accounting in their books of account and this does not disprove the fact that cutting tools are used along with machinery as aid in functioning of the machinery. Like any other part or accessory of a machine, cutting tools also wear out after repetitive use and need to be replaced. The declarations and certificates issued by the industries are therefore not of much help in understanding the nature of the commodity for the purpose of taxation under the KTEG Act, 1979. As pointed above, the Hon'ble Supreme Court has held 'arc carbons' to be accessories of cinematograph projectors, even though the arc carbons get completely consumed or burn out in their use in the projectors.

12. It has been argued that the Commissioner of Commercial Taxes has issued clarification vide No.CLR.CR.720/89-90 Dated:20.02.1990 under the KST Act, 1957 to the effect that tools similar to drilling bits cannot be regarded as either machinery parts or its accessories and they fall under Sl.No.1(iii) (e) of Part M of Second Schedule and thus tools cannot be considered as accessories or parts of machinery. In this regard, it is seen that this clarification has been cancelled subsequently in view of the judgment of Hon'ble High Court of Karnataka in Jagadish Colour Lab Vs State of karnataka (1990) 107 STC 522. Apart from this, tools were clarified to be falling under Sl.No.1(iii) (e) of Part M of Second Schedule and this entry reads as under:

*"(e) Tools and wear parts used in industrial machinery such as twist drills, taps, reamers, cutters, dies, grinding wheels, button bits, tungsten, carbide wear parts, ceramic industrial wear parts and the like."*

At the same time, entry 1 (iii) (a) of Part M of Second Schedule to the KST Act read as under:

*"(a) Machinery (all kinds) and parts and accessories thereof except those falling under other items of this entry and those specified elsewhere."*

13. From the above it is clear that since there was separate entry for tools, it was clarified that they fall under Sl.No.1(iii) (e) of Part M of Second Schedule to the KST Act. This does not help the applicant in his argument that cutting tools are not parts or accessories of machinery and on the contrary, it could be argued that but for the exception provided in the entry 1(iii) (a), tools specified in the entry 1(iii) (e) would have fallen under the entry 1 (iii) (a).

14. In commercial parlance, 'consumable' means something meant for consumption. As per Shorter Oxford English Dictionary (fifth Edition), 'Consumable' means 'an article intended for consumption, not for repeated use' (emphasis supplied).

15. Thus, on the basis of Supreme Court decisions cited above and commercial parlance, tools are not consumables. As held by the Supreme Court in similar cases cited above, tools would squarely fall in the category of accessories. While advancing his arguments, the learned advocate argued that accessory means an aid or addition to the machinery which enhances its functioning and effectiveness. He stressed that even without accessory, a machine or equipment is complete.

16. However, it is seen that a machinery cannot be complete without a tool. In the absence of a tool, a machine cannot function. Going by this logic, tool is a part of a machinery. However, in view of the Supreme Court decisions cited above and drawing analogy there-from, it is held that tools are not consumables but accessories.

**Order No.KTEG.CLR.CR.13/08-09, Dated:11th August, 2009**

In the circumstances, it is clarified that cutting tools such as twist drills, taps, reamers, cutters, drill bits, etc. are not consumables. They fall under Sl.No. 52 of First Schedule to the KTEG Act, 1979 and are liable to tax at 2% as per Sl.No.7 of notification No.FD 11 CET 2002, Dated:30.03.2002.

**PRADEEP SINGH KHAROLA**
Commissioner of Commercial Taxes,
(Karnataka), Bangalore.

PR-809

**ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ**

**ಪತ್ರಿಕಾ ಪ್ರಕಟಣೆ**

**ಸಂ:ಜಿಪವಅ:ಗಿಉಯೋ:ಗಿಕವಿಅ:ಕೌಶಲ್ಯತಬೇ:ಸಿಆರ್:25:09-10, ದಿನಾಂಕ:21ನೇ ಆಗಸ್ಟ್, 2009**

**ವಿಷಯ:** ಕೌಶಲ್ಯ ಯೋಜನೆಯಡಿ ಪರಿಶಿಷ್ಟವರ್ಗಗಳ ಮಹಿಳಾ ಅಭ್ಯರ್ಥಿಗಳಿಗೆ ತರಬೇತಿ ನೀಡಲು ಅರ್ಜಿಗಳನ್ನು ಕರೆಯುವ ಬಗ್ಗೆ.

**ಉಲ್ಲೇಖ:**1) ಸರ್ಕಾರದ ಆದೇಶ ಸಂಖ್ಯೆ: ಆಇ324:ವೆಚ್ಚ:12:09 ದಿನಾಂಕ:11.05.2009.

2) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ324:ವೆಚ್ಚ:12:09, ದಿನಾಂಕ:11.05.2009.

3) ನಿರ್ದೇಶಕರು ಪ.ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಪಚಕನಿ:ಗಿಉಯೋ:ಸಿಆರ್-68:09-10, ದಿನಾಂಕ:10.08.2009.

4) ಇದೇ ಕಛೇರಿ ಪ್ರಕಟಣೆಯ ದಿನಾಂಕ:21.08.2009.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ 2009-10ನೇ ಸಾಲಿನಲ್ಲಿ ಪರಿಶಿಷ್ಟ ವರ್ಗಗಳ ಮಹಿಳಾ ಅಭ್ಯರ್ಥಿಗಳಿಗೆ ಕೌಶಲ್ಯ ಯೋಜನೆಯಡಿ ಈ ಕೆಳಕಂಡ ಕೋರ್ಸ್‌ಗಳಿಗೆ ತರಬೇತಿ ನೀಡಲು ಉದ್ದೇಶಿಸಿದೆ.

| **ಕೋರ್ಸಿನ ವಿವರ** | | **ತರಬೇತಿ ವಿದ್ಯಾರ್ಹತೆ** | **ಕೋರ್ಸ್‌ನ ಅವಧಿ** |
|---|---|---|---|
| 1. | **ಡೆಸ್ಕ್‌ಟಾಪ್ ಪಬ್ಲಿಕೇಷನ್**<br>ಬೇಸಿಕ್ ಸ್ಪೋಕನ್ ಇಂಗ್ಲೀಷ್ ಮತ್ತು ಪರ್ಸನಾಲಿಟಿ ಡೆವಲಪ್‌ಮೆಂಟ್ | ಎಸ್‌ಎಸ್‌ಎಲ್‌ಸಿ:ಪಿಯುಸಿ:ಪದವಿ | 4 ತಿಂಗಳು |

| ಕ್ರ. ಸಂ. | ಆಡಳಿತ ಶಾಖೆ | ನಾಗರೀಕರಿಗೆ ಮಾಹಿತಿ ಪಡೆಯುಲು ಈ ಕಛೇರಿಯಲ್ಲಿ ಇರುವ ಅನುಕೂಲಗಳ ವಿವರ |
|---|---|---|
| 2. | ಭೂ ಹಕ್ಕು ದಾಖಲಾತಿ | ಕರ್ನಾಟಕ ಭೂ ಕಂದಾಯ ಕಾಯ್ದೆ ಅಡಿಯಲ್ಲಿ ಪಟ್ಟಾ ಜಮೀನುಗಳಲ್ಲಿ ಹಕ್ಕು ದಾಖಲೆಗಳ ನಿರ್ವಹಣೆ ಹಕ್ಕು ಬದಲಾವಣೆ ವಿವಾದಾಸ್ಪದ ಪ್ರಕರಣಗಳ ವಿಚಾರಣೆ ನಡೆಸುವದು. ಗಣಕೀಕೃತ ಆರ್ ಟಿ ಸಿ ಮತ್ತು ಮುಟೇಷನ್‌ಗಳನ್ನು ಗಣಕಯಂತ್ರದ ಮೂಲಕ 15.00 ರೂ.ಗಳನ್ನು ಪಡೆದು ವಿತರಿಸುವುದು. ಕಂದಾಯ ಮೇಲ್ಮನವಿ ಪ್ರಕರಣಗಳ ನೋಟೀಸು ಜಾರಿ ಮಾಡುವುದು ಭೂಮಿ ತಂತ್ರಾಂಶದ ಮುಖೇನ ಹಕ್ಕು ಬದಲಾವಣೆ ಕಾರ್ಯ ನಿರ್ವಹಿಸುವುದು ಸದರಿ ತಂತ್ರಾಂಶದಿಂದ ಸರ್ವೆ ಸ್ಕೆಚ್ ಮ್ಯುಟೇಷನ್ ದಾಖಲೆಗಳನ್ನು ಸ್ಕ್ಯಾನ್ ಮಾಡಿ ಗಣಕೀಕೃತಗೊಳಿಸುವುದು. ಆರ್ ಟಿ ಸಿ ಮತ್ತು ಮ್ಯುಟೇಷನ್ ಕಿಯೋಸ್ಕನಲ್ಲಿ ವಸೂಲಾಗುವ ಹಣದ ಲೆಕ್ಕ ಪತ್ರ ನಿರ್ವಹಣೆ. |
| 3. | ಬೇಡಿಕೆ ವಸೂಲಿ ಬಾಕಿ (ಡಿಸಿಬಿ) | ಕೃಷಿ ಹಿಡುವಳಿ ಜಮೀನುಗಳ ಮೇಲೆ ನಿಗದಿಪಡಿಸಿದ ಕಂದಾಯ ನೀರಾವರಿ ಮತ್ತು ಇತರೆ ಕಂದಾಯಗಳ ಬೇಡಿಕೆ ಪಟ್ಟಿ ತಯಾರಿಸುವುದು ವಸೂಲಿ ಮತ್ತು ಬಾಕಿಗಳ ನಿರ್ವಹಣೆ ಕೈಗೊಳ್ಳುವುದು ಸರ್ಕಾರದ ಇತರೆ ಇಲಾಖೆಗಳಿಂದ ವಸೂಲಿ ಮಾಡದೆ ಇರುವ ತೆರಿಗೆಗಳ ಬಾಕಿಗಳು ಮತ್ತು ಸಾಲಗಳನ್ನು ಬಾಕಿ ಇರುವ ಮೊತ್ತವನ್ನು ಕರ್ನಾಟಕ ಪಬ್ಲಿಕ್ ಮನೀಸಿ (ರಿಕವರಿ ಆಫ್ ಡ್ಯೂಸ್) ಕಾಯ್ದೆ 1979ರನ್ವಯ ಭೂ ಕಂದಾಯ ಬಾಕಿಯಂತೆ ವಸೂಲಾತಿಗೆ ಕ್ರಮ ವಹಿಸುವುದು. |
| 4. | ಜಮಾ ಬಂದಿ | ಎಲ್ಲಾ ಕಂದಾಯ ಗ್ರಾಮಗಳ ಜಮೀನುಗಳಿಗೆ ಸಂಬಂಧಿಸಿದಂತೆ ವಾರ್ಷಿಕ ಕಂದಾಯ ನಿಗದಿ ವಸೂಲಾತಿ ಮತ್ತು ಬಾಕಿ ವಿವರಗಳನ್ನೊಳಗೊಂಡಂತೆ ಹಾಗೂ ಭೂ ಕಂದಾಯ ಮನ್ನಾ ಮಾಡಲಾಗಿರುವ ಮತ್ತು ಸರ್ಕಾರಿ ಜಮೀನುಗಳ ವಿವರಗಳನ್ನೊಳಗೊಂಡಂತೆ ವಾರ್ಷಿಕ ಜಮಾ ಬಂದಿ ತಾಲ್ಲೂಕು ಜಮಾ ಬಂದಿಯ ತಾಲ್ಲೂಕು ತಹಶೀಲ್ದಾರ್‌ಗಳು ಮತ್ತು ಹುಜೂರು ಲೆಕ್ಕವನ್ನು ಜಿಲ್ಲೆಯ ಜಿಲ್ಲಾಧಿಕಾರಿಗಳು ಮತ್ತು ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಜಮಾ ಬಂದಿ ಕಾರ್ಯವನ್ನು ನಿರ್ವಹಿಸುತ್ತಿರುತ್ತಾರೆ. |
| 5. | ಭೂ ಮಂಜೂರಾತಿ | ಈ ಶಾಖೆಯಲ್ಲಿ ಸರ್ಕಾರಿ ಜಮೀನುಗಳಲ್ಲಿ ಕೃಷಿಗೆ ಯೋಗ್ಯವಾದ ಜಮೀನನ್ನು ಭೂ ರಹಿತರಿಗೆ ಹಂಚುವುದು ಹಾಗೂ ಇನ್ನಿತರೆ ಸಾರ್ವಜನಿಕ ಉದ್ದೇಶಗಳಿಗೆ ಭೂ ಮಂಜೂರಾತಿ ಮಾಡುವುದು. ಗ್ರಾಮದ ಸ್ಮಶಾನ/ದನಕರುಗಳಿಗೆ ಮೇಯಲು ಗೋಮಾಳಾಕ್ಕೆ ಭೂಮಿ ಕಾಯ್ದಿರಿಸುವುದು. ಭೂ ಮಂಜೂರಾತಿ ಪ್ರಕರಣಗಳಲ್ಲಿ ಮಂಜೂರಾದ ವ್ಯಕ್ತಿ ಮಂಜೂರಿ ದಿನಾಂಕದಿಂದ 15 ವರ್ಷಗಳ ಕಾಲ ಪರಬಾರೆ ಮಾಡಬಾರದೆಂಬ ಷರತ್ತಿಗೆ ಒಳಪಡಿಸಿ ಜಮೀನು ಮಂಜೂರಿ ಮಾಡಲಾಗುವುದು. ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನಾಂಗಕ್ಕೆ ಸಂಬಂಧಿಸಿದಂತೆ ಯಾವ ಕಾಲಕ್ಕೂ (ಶಾಶ್ವತ ಪರಭಾರೆ ನಿಷೇದ) ಪರಭಾರೆ ಮಾಡಬಾರದೆಂಬ ಷರತ್ತಿನೊಂದಿಗೆ ಮಂಜೂರಿ ಮಾಡಲಾಗುವುದು. ಮೇಲ್ಕಂಡ ನಿಯಮ ಉಲ್ಲಂಘನೆ ಮಾಡಿ ಜಮೀನು ಮಾರಾಟ ಮಾಡಿದ ಪಕ್ಷದಲ್ಲಿ ಪರಭಾರೆ ಮಾಡಿರುವುದನ್ನು ನಿಯಮಾನುಸಾರ ರದ್ದು ಪಡಿಸಲಾಗುವುದು.ಸರ್ಕಾರಿ ಜಮೀನು ಅನಧಿಕೃತ ಅತಿಕ್ರಮಣ ಮಾಡಿರುವುದನ್ನು ಕ್ರಮ ಜರುಗಿಸಿ ತೆರವುಗೊಳಿಸಲಾಗುವುದು. |
| 6. | ಅನ್ಯಕ್ರಾಂತ ( ಭೂ ಪರಿವರ್ತನೆ) | ಈ ಶಾಖೆಯ ಕೃಷಿ ಜಮೀನನ್ನು ಕೃಷಿಯೇತರ ಉದ್ದೇಶಗಳಿಗೆ (ವಸತಿ ವಾಣಿಜ್ಯ ಕೈಗಾರಿಕೆ) ಭೂ ಪರಿವರ್ತನೆಗೆ ಅಗತ್ಯ ದಾಖಲಾತಿಗಳೊಂದಿಗೆ ಸ್ಥಳ ತನಿಖೆ ಮಾಡಿ ಮಾನ್ಯ ಜಿಲ್ಲಾಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸಲಾಗುತ್ತಿದೆ. ಭೂ ಪರಿವರ್ತನೆಗೂ ಮುನ್ನಾ ಅನಧಿಕೃತವಾಗಿ ಕಟ್ಟಡ ನಿರ್ಮಾಣ ಮಾಡಿದ್ದಲ್ಲಿ ರಾಷ್ಟ್ರೀಯ ಹೆದ್ದಾರಿಗೆ 5 ಕಿ.ಮಿ ಒಳಪಡುವ ಪ್ರದೇಶಗಳಿಗೆ ದಂಡ ವಿಧಿಸಲು ಮಾನ್ಯ ಉಪ ವಿಭಾಗಾಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸಲಾಗುವುದು. ರಾಷ್ಟ್ರೀಯ ಹೆದ್ದಾರಿಗೆ 5 ಕಿಲೋಮೀಟರ್ ನಂತರ ಒಳಪಡುವ ಪ್ರದೇಶಗಳಿಗೆ ಸಂಬಂಧಪಟ್ಟ ತಹಶೀಲ್ದಾರ್‌ರವರು ದಂಡ ವಿಧಿಸಿ ಅನ್ಯಕ್ರಾಂತ ಮಂಜೂರಾತಿಗೆ ಮಾನ್ಯ ಜಿಲ್ಲಾಧಿಕಾರಿಗಳಿಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗುವುದು. |

| ಕ್ರ. ಸಂ. | ಆಡಳಿತ ಶಾಖೆ | ನಾಗರೀಕರಿಗೆ ಮಾಹಿತಿ ಪಡೆಯಲು ಈ ಕಛೇರಿಯಲ್ಲಿ ಇರುವ ಅನುಕೂಲಗಳ ವಿವರ |
|---|---|---|
| 7. | ಚುನಾವಣೆ | ಪ್ರತಿ ವರ್ಷ ಮತದಾರರ ಪಟ್ಟಿ ಪರಿಷ್ಕರಣೆ ಪ್ರಕ್ರಿಯೆ ಮತದಾರರ ಭಾವಚಿತ್ರ ತೆಗೆಸುವ ಕೆಲಸ ರಾಜ್ಯ ಸ್ಥಳೀಯ ಸಂಸ್ಥೆಗಳ ಮತ್ತು ಕೇಂದ್ರದ ವಿವಿಧ ಚುನಾವಣೆಗಳನ್ನು ನಡೆಸುವಲ್ಲಿ ಸಕ್ರಿಯ ಪಾತ್ರ ವಹಿಸಲಾಗುತ್ತದೆ. |
| 8. | ನ್ಯಾಯಾಂಗ ಶಾಖೆ | ಈ ಶಾಖೆಯಲ್ಲಿ CRPC ಕಲಂ 107, 108, 109 ಹಾಗೂ 110ರ ಅನ್ವಯ ದಾಖಲಾಗುವ ಪ್ರಕರಣಗಳ ವಿಚಾರಣೆ ನೆಡೆಸಿ ನಿಯಮಾನುಸಾರ ಆದೇಶ ಹೊರಡಿಸುವುದು. ಹಾಗೂ ಶಾಂತಿ ಸುವ್ಯವಸ್ಥೆ ಮತ್ತು ಸಾರ್ವಜನಿಕರ ನೆಮ್ಮದಿಗೆ ಭಂಗ ಬಾರದ ಹಾಗೆ ಅಗತ್ಯ ಕ್ರಮ ವಹಿಸಲಾಗುವುದು. |
| 9. | ಮುಜರಾಯಿ ಮತ್ತು ಆರಾಧನಾ | ಧಾರ್ಮಿಕ ಮತ್ತ ದತ್ತಿ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಬರುವ ಎಲ್ಲಾ ದೇವಾಲಯಗಳ ಕಾರ್ಯ ನಿರ್ವಹಣೆ ಮತ್ತು ಜಾತ್ರಾ ಉತ್ಸವಗಳನ್ನು ನಡೆಸುವುದು. ದೇವಾಲಯದ ಅರ್ಚಕರುಗಳಿಗೆ ತಸ್ತಿಕ್ ಹಣ ಮಂಜೂರು ಮಾಡುವುದು. ದೇವಾಲಯಗಳ ಆದಾಯದ ಹಾಗೂ ಖರ್ಚು ವೆಚ್ಚ ಲೆಕ್ಕ ನಿರ್ವಹಣೆ ಮಾಡುವುದು. ಆರಾಧನಾ ಯೋಜನೆಯಡಿಯಲ್ಲಿ ದೇವಸ್ಥಾನದ ಜೀರ್ಣೋದ್ದಾರ ಸಂಬಂದ ಅನುದಾನ ಮಂಜೂರಾದ ಬಾಬ್ತು ಹಣ ಬಳಕೆ ಮಾಡಿ ಬಳಕೆ ಪ್ರಮಾಣ ಪತ್ರವನ್ನು ಮಾನ್ಯ ಜಿಲ್ಲಾಧಿಕಾರಿಗೆ ಸಲ್ಲಿಸುವುದು. |
| 10. | ಪ್ರಕೃತಿ ವಿಕೋಪ | ಈ ಶಾಖೆಯಲ್ಲಿ ಪ್ರಾಕೃತಿಕವಾಗಿ ಉಂಟಾಗುವ ಬರ ಮತ್ತು ಅತಿವೃಷ್ಟಿ ಸಂಭವಿಸಿದಾಗ ತುರ್ತು ರಕ್ಷಣಾತ್ಮಕ ಕ್ರಮಗಳನ್ನು ಜರುಗಿಸುವುದು. ಬರಗಾಲ ಉಂಟಾದಾಗ ಕಾಮಗಾರಿಗಳನ್ನು ತೆಗೆದುಕೊಂಡು ಕೃಷಿಕರು ಕೂಲಿಗಾರರಿಗೆ ಕೂಲಿ ಕೆಲಸ ಲಭ್ಯವಾಗುವಂತೆ ಸಾರ್ವಜನಿಕ ಮೂಲ ಸೌಲಭ್ಯವಾದ ಕುಡಿಯುವ ನೀರಿನ ಪೂರೈಕೆಗಾಗಿ ಕ್ರಮ ಕೈಗೊಳ್ಳುವುದು. ಅತಿವೃಷ್ಟಿ ಆದಾಗ ತುರ್ತು ರಕ್ಷಣಾ ಕ್ರಮಗಳನ್ನು ಕೈಗೊಳ್ಳಲಾಗುವುದು. ನಷ್ಟ ಸಂಭವಿಸಿದವರಿಗೆ ಪರಿಹಾರ ಸೌಲಭ್ಯ ಒದಗಿಸುವುದು ಆಕಸ್ಮಿಕ ಬೆಂಕಿ ಮತ್ತು ಅತಿವೃಷ್ಟಿ ಅಪಘಾತಗಳು ಹಾಗೂ ಸಿಡಿಲು ಬಡಿದು ಮೃತಪಟ್ಟರವರ ಕುಟುಂಬಗಳಿಗೆ ಪರಿಹಾರ ನೀಡಲಾಗುವುದು. |
| 11. | ಮಾಶಾಸನಗಳು | ಅಂಗವಿಕಲ ಮಾಶಾಸನ: ಶೇಕಡ 75ಕ್ಕಿಂತ ಕಡಿಮೆ ಅಂಗವಿಕಲತೆ ಇದ್ದಲ್ಲಿ ಮಾಸಿಕ 400 ಶೇ: 75ಕ್ಕಿಂತ ಹೆಚ್ಚು ಇದ್ದಲ್ಲಿ ಮಾಸಿಕ 1000 ರೂ.ಗಳನ್ನು ಅರ್ಹ ಅರ್ಜಿದಾರರಿಗೆ ಮಂಜೂರು ಮಾಡಲಾಗುವುದು. ನಿರ್ಗತಿಕ ವಿಧವಾ ವೇತನ ವಾರ್ಷಿಕ ಆದಾಯ 6000/- ರೂ.ಗಳಿಗೆ ಒಳಪಟ್ಟು ನಿರ್ಗತಿಕ ವಿಧವೆಯರಿಗೆ ಮಾಸಿಕ 400/- ರೂ.ಗಳನ್ನು ಅರ್ಹಅರ್ಜಿದಾರಿಗೆ ಮಂಜೂರು ಮಾಡಲಾಗುವುದು. 3. ವೃದ್ದಾಪ್ಯ ವೇತನ : 65 ವರ್ಷ ಮೇಲ್ಪಟ್ಟು ಆದಾಯ ರಹಿತ ನಿರ್ಗತಿಕ ವೃದ್ದರಿಗೆ ಮಾಸಿಕ 400/- ರೂ.ಗಳನ್ನು ಅರ್ಹ ಅರ್ಜಿದಾರರಿಗೆ ಮಂಜೂರು ಮಾಡಲಾಗುವುದು. 4. ಸಂದ್ಯಾ ಸುರಕ್ಷಾ ಯೋಜನೆ : 65 ವರ್ಷ ಮೇಲ್ಪಟ್ಟು ಹಾಗೂ ಮಾಸಿಕ 20000/- ರೂ.ಗಳ ಒಳಗೆ ಆದಾಯ ಉಳ್ಳವಯಸ್ಕರಿಗೆ ಮಾಸಿಕ 400/- ರೂ.ಗಳನ್ನು ಅರ್ಹ ಅರ್ಜಿದಾರರಿಗೆ ಮಂಜೂರು ಮಾಡಲಾಗುವುದು. ಮೇಲ್ಕಂಡ ಎಲ್ಲಾ ಮಾಶಾಸನಗಳನ್ನು ನಾಡ ಕಛೇರಿ ವ್ಯಾಪ್ತಿಗೆ ಒಳಪಡುವ ಹೋಬಳಿಗಳನ್ನು ಹೊರತುಪಡಿಸಿ ಸಂಬಂಧಿಸಿದ ಹೋಬಳಿ ಕಛೇರಿಗೆ ಬೇಟಿ ನೀಡಿ ಅರ್ಜಿದಾರರನ್ನು ಸಂದರ್ಶನ ಮಾಡಿ ಅರ್ಹ ಅರ್ಜಿದಾರರಿಗೆ ಸ್ಥಳದಲ್ಲಿಯೇ ಮಾಶಾಸನವನ್ನು ಮಂಜೂರು ಮಾಡಲಾಗುತ್ತದೆ.<br>ಮೇಲ್ಕಂಡ ನಾಲ್ಕು ಮಾಶಾಸನಗಳು ಜಾರಿಗೆ ಬಂದ ದಿನಾಂಕದಿಂದ ಡಿಸೆಂಬರ್ 2008ರವರೆಗೆ ಈ ಕೆಳಕಂಡಂತೆ ಮಾಶಾಸನವನ್ನು ಮಂಜೂರು ಮಾಡಲಾಗಿರುತ್ತದೆ. 1. ಅಂಗವಿಕಲ ವೇತನ - 3402 2. ನಿರ್ಗತಿಕ ವಿಧವಾ ವೇತನ - 8409 3.ವೃದ್ದಾಪ್ಯ ವೇತನ 12772 4. ಸಂಧ್ಯ ಸುರಕ್ಷಾ ಯೋಜನೆ- 2271. |

| ಕ್ರ. ಸಂ. | ಆಡಳಿತ ಶಾಖೆ | ನಾಗರೀಕರಿಗೆ ಮಾಹಿತಿ ಪಡೆಯುಲು ಈ ಕಛೇರಿಯಲ್ಲಿ ಇರುವ ಅನುಕೂಲಗಳ ವಿವರ |
|---|---|---|
| 12. | ರಾಷ್ಟ್ರೀಯ ಸಾಮಾಜಿಕ ನೆರವು ಯೋಜನೆ | ಈ ಯೋಜನೆಯು ಕೇಂದ್ರ ಸರ್ಕಾರದ ಯೋಜನೆಯಾಗಿದ್ದು ಯಾವುದೇ ಕುಟುಂಬದಲ್ಲಿ ದುಡಿಯುವ ಪ್ರಮುಖ ವ್ಯಕ್ತಿಯು ಮೃತಪಟ್ಟಲ್ಲಿ ಮೃತಪಟ್ಟ ದಿನಾಂಕದಿಂದ ಆರು ತಿಂಗಳ ಒಳಗೆ ಅರ್ಜಿಸಲ್ಲಿಸಬೇಕು. ಅರ್ಜಿದಾರರ ಕುಟುಂಬದ ವಾರ್ಷಿಕ ವರಮಾನ 12,000/- ಹನ್ನೆರಡು ಸಾವಿರ ಮೀರಿರಬಾರದು ಹಾಗೂ ಮೃತಪಟ್ಟ ವ್ಯಕ್ತಿ 65 ವರ್ಷ ಮೀರಿದ ಪಕ್ಷದಲ್ಲಿ ಅರ್ಹ ಅರ್ಜಿದಾರರಿಗೆ 10000/- ರೂ.ಗಳ ಸಹಾಯಧನವನ್ನು ಮಂಜೂರು ಮಾಡಲಾಗುವುದು.<br>ಸದರಿ ಯೋಜನೆ ಪ್ರಾರಂಭಮಾಡಿದ ದಿನಾಂಕದಿಂದ ಡಿಸೆಂಬರ್ 2008ರ ಅಂತ್ಯಯದವರೆಗೆ 1535 ಫಲಾನುಭವಿಗಳಿಗೆ 10000/- ರೂ.ಗಳಿಗೆ ಸಹಾಯ ಧನ ಮಂಜೂರಿ ಮಾಡಲಾಗಿದೆ. |
| 13. | ಅಂತ್ಯ ಸಂಸ್ಕಾರ ಯೋಜನೆ | ಬಡತನ ರೇಖೆಗಿಂತ ಒಳಪಟ್ಟ ಕುಟುಂಬದಲ್ಲಿ ಯಾವುದೇ ವ್ಯಕ್ತಿ ಮೃತಪಟ್ಟಲ್ಲಿ ಆ ವ್ಯಕ್ತಿಯ ಅಂತ್ಯ ಸಂಸ್ಕಾರಕ್ಕಾಗಿ 1000/- ರೂ.ಗಳ ಸಹಾಯಧನ ಮೃತಪಟ್ಟ ವ್ಯಕ್ತಿಯ ಕುಟುಂಬದವರಿಗೆ ಮಂಜೂರಿ ಮಾಡಲಾಗುವುದು. ಸದರಿ ಯೋಜನೆ ಪ್ರಾರಂಭವಾದಾಗಿನಿಂದ ಡಿಸೆಂಬರ್ 2008ರ ಅಂತ್ಯದ ವರೆಗೆ 1198 ಕುಟುಂಬಗಳಿಗೆ ಸಹಾಯಧನ ನೀಡಲಾಗುವುದು. |
| 14. | ಆಡಳಿತ | ತಾಲ್ಲೂಕು ಆಡಳಿತ ವ್ಯಾಪ್ತಿಯಲ್ಲಿ ಬರುವ ಕೆಲವೊಂದು ಇಲಾಖೆಗಳ ಕಛೇರಿಗಳ ತನಿಖೆ ಮಾಡುವುದು. ತಾಲ್ಲೂಕಿನಲ್ಲಿ ನಡೆಯುವ ತಾಲ್ಲೂಕು ಉತ್ಸವ ರಾಷ್ಟ್ರೀಯ ಹಬ್ಬಗಳ ತಾಲ್ಲೂಕು ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಜರುಗುವ ಸಭೆ ಸಮಾರಂಭಗಳನ್ನು ನಿರ್ವಹಣೆ ಮಾಡುವುದು. ಅಧಿಕಾರಿಗಳ ಮಾಸಿಕ ಸಭೆ ಇತರೆ ಶಿಷ್ಟಾಚಾರಗಳ ಸಭೆ ನಿರ್ವಹಣ ಮಾಡುವುದು. |
| 15. | ಭೂ ಸ್ವಾದೀನ | ಸಾರ್ವಜನಿಕ ಕಟ್ಟಡ ನೀರಾವರಿ ಯೋಜನೆಗಳು ವಿದ್ಯುತ್ ಪ್ರಸರಣ ನಿಗಮ ವಸತಿ ಯೋಜನೆ ಹಾಗೂ ಇತ್ಯಾಧಿ ಸಾರ್ವಜನಿಕ ಉಪಯುಕ್ತತೆಗಳಿಗೆ ಪಟ್ಟಾ ಭೂಮಿಗಳನ್ನು ಭೂ ಸ್ವಾಧೀನ ಪಡಿಸಿಕೊಳ್ಳುವ ಉದ್ದೇಶ ಅಧಿಸೂಚನೆ 4 (1) ಮತ್ತು 6(1) ಗಳನ್ನು ಪ್ರಚಾರ ಪಡಿಸುವುದು. ಹಾಗೂ ನೋಟೀಸ್‌ಗಳನ್ನು ಜಾರಿಮಾಡುವುದು. ಭೂ ಸ್ವಾಧೀನಾಧಿಕಾರಿಗಳ ಕಛೇರಿಯಿಂದ ಬರುವ ನಿರ್ದೇಶಗಳಂತೆ ಕಡತ ತಯಾರಿಸಿ ಪ್ರಸ್ತಾವನೆ ಸಲ್ಲಿಸುವುದು. |
| 16. | ಆಮದು ಶಾಖೆ | ಕಾರ್ಯಾಲಯಕ್ಕೆ ಸ್ವೀಕೃತವಾಗುವ ಸರ್ಕಾರ ಅಥವಾ ಕಾರ್ಯಾಲಯದ ಮತ್ತು ಸಾರ್ವಜನಿಕರಿಂದ ಲೋಕಸಭೆ/ ವಿಧಾನಪರಿಷತ್ ಹಾಗೂ ಸ್ಥಳೀಯ ಸಂಸ್ಥೆಯ ಸದಸ್ಯರುಗಳಿಂದ ಸ್ವೀಕೃತಿಯಾದ ಫ್ಯಾಕ್ಸ್ ತಂತಿ ಸಂದೇಶ ಸುತ್ತೋಲೆ ಸಾಮಾನ್ಯ ಅರ್ಜಿಗಳನ್ನು ಸಾಮಾನ್ಯ ಪುಸ್ತಕದಲ್ಲಿ ಮತ್ತು ಇತರೆ ಪುಸ್ತಕಗಳಲ್ಲಿ ನೋಂದಾಣಿ ಮಾಡಿಕೊಂಡು ಆಯಾಯಾ ಶಾಖೆಯ ವಿಷಯ ನಿರ್ವಾಹಕರಿಗೆ ವಿತರಣೆಯನ್ನು ಮಾಡುವುದು. |
| 17. | ರವಾನೆ ಶಾಖೆ | ಈ ಕಾರ್ಯಾಲಯದಿಂದ ಬಿಡುಗಡೆ ಆಗುವ ವ್ಯವಹಾರಗಳ ಪತ್ರಗಳು ಆದೇಶಗಳು ಹಾಗೂ ನೋಟೀಸುಗಳನ್ನು ರವಾನೆ ಪುಸ್ತಕದಲ್ಲಿ ನೋಂದಾಣಿ ಮಾಡಿಕೊಂಡು ಸಂಬಂಧಪಟ್ಟ ಕಛೇರಿ ಹಾಗೂ ಇತರರಿಗೆ ರವಾನೆ ಮಾಡುವುದು ಇವುಗಳಲ್ಲಿ ಕೆಲವು ಅಂಚೆ ಮೂಲಕ ಹಾಗೂ ಕೆಲವು ಸ್ಥಳೀಯವಾಗಿ ಜಾರಿ ಮಾಡುವ ಪತ್ರಗಳನ್ನು ಪ್ರತ್ಯೇಕ ವಹಿಯಲ್ಲಿ ನೋಂದಾಯಿಸಿ ರವಾನೆ ಮಾಡುವುದು ಹಾಗೂ ಅಂಚೆ ಚೀಟಿಗಳ ಲೆಕ್ಕವನ್ನು ಸಹ ಇಡಲಾಗುವುದು. |

| ಕ್ರ. ಸಂ. | ಆಡಳಿತ ಶಾಖೆ | ನಾಗರೀಕರಿಗೆ ಮಾಹಿತಿ ಪಡೆಯುಲು ಈ ಕಛೇರಿಯಲ್ಲಿ ಇರುವ ಅನುಕೂಲಗಳ ವಿವರ |
|---|---|---|
| 18. | ಭೂ ಸುಧಾರಣೆ | ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರಲ್ಲಿ ಅವಕಾಶವಿದ್ದಂತೆ ಕಲಂ 66 ರಡಿಯಲ್ಲಿ ಎಲ್ಲಾ ಭೂ ಮಾಲೀಕರಿಂದ ಭೂ ಹಿಡುವಳಿಯ ಘೋಷಣೆ ಪಡೆಯುವುದು. ಕಲಂ 38ರ ಅಡಿಯಲ್ಲಿ ವಸತಿ ನಿರ್ಮಾಣ ಮಾಡಿದ ಜಮೀನನ್ನು ಮಂಜುರಾರು ಮಾಡುವುದು ಕಲಂ 78ರ ಅಡಿಯಲ್ಲಿ ಹೆಚ್ಚುವರಿ ಜಮೀನನ್ನು ಭೂ ರಹಿಸರಿಗೆ ಮಂಜೂರು ಮಾಡುವ ಕೆಲಸದ ಮೇಲ್ವಿಚಾರಣೆ 78 ರಡಿಯಲ್ಲಿ ಗೇಣಿ ಭೂಮಿಯನ್ನು ಮಂಜೂರಿ ಮಾಡುವುದು. ಘೋಷಣೆ ಮಾಡುವುದು ಮಾರಾಟ ಮಾಡಿದ ಕೃಷಿಯೇತರ ಕಾರ್ಯಗಳಿಗೆ ಉಪಯೋಗ ಮಾಡಿದ ಮತ್ತು ಹಿಡುವಳಿಯನ್ನು ಉಲ್ಲಂಘನೆಮಾಡಿ ಮಾರಾಟಮಾಡಿದ ಜಮೀನುಗಳನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳುವುದು ಮಾಜಿ ಭೂ ಮಾಲೀಕರಿಗೆ ಪರಿಹಾರ ಧನ ಮಂಜೂರಾತಿ ಪ್ರಕ್ರಿಯೆ ಮೇಲ್ವಿಚಾರಣೆ ಸಂಘ ಸಂಸ್ಥೆಗಳಿಗೆ ನಿರ್ವಹಣೆಗಾಗಿ ಬೇಕಾಗುವ ಜಮೀನನು ನಿರ್ಣಯಿಸುವುದು.<br>ಕರ್ನಾಟಕ ಭೂಸುಧಾರಣೆ ಕಾಯ್ದೆ 1961ರ ಕಲಂ 109ರಡಿ ಸಂಘ ಸಂಸ್ಥೆಗಳು ಜಮೀನು ಹೊಂದಬೇಕಾಗಿದ್ದಲ್ಲಿ ಸರ್ಕಾರದ ಸುತ್ತೋಲೆ ನಂ : ಸಂವಶ್ಯಶಾ೯ 47 ಶಾಸನ 2001 ದಿನಾಂಕ: 23-4-03ರಂತೆ ಅನುಮತಿ ಪಡೆಯಬೇಕಾಗಿರುತ್ತದೆ. 2 ಯುನಿಟ್‌ವರೆಗೆ ವಿದ್ಯಾಸಂಸ್ಥೆಗಳಿಗೆ 10 ಯುನಿಟ್‌ವರೆಗೆ ಕೈಗಾರಿಕಾ ಉದ್ದೇಶಕ್ಕೆ 1/4 ಯುನಿಟ್‌ವರೆಗೆ ಮಾನ್ಯತೆ ಪಡೆದ ಅಥವಾ ನೋಂದಾಯಿತ ಪೂಜಾ ಸ್ಥಳಕ್ಕೆ ವ್ಯವಸಾಯೇತರ ಉದ್ದೇಶಕ್ಕೆ ರಾಜ್ಯಸರ್ಕಾರದ ವಸತಿ ಯೋಜನೆಗಳಿಗೆ 10 ಯುನಿಟ್‌ಗಳವರೆಗೆ ಜಮೀನು ಖರೀದಿಸಲು ಅನುಮತಿಯನ್ನು ಜಿಲ್ಲಾಧಿಕಾರಿಗಳಿಂದ ಪಡೆಯಬೇಕಾಗಿರುತ್ತದೆ. ಮೇಲ್ಕಂಡ ಮಿತಿಗಿಂತ ಹೆಚ್ಚು ಜಮೀನು ಖರೀದಿಸಲು ಬರುವ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಒಪ್ಪಿಸಲಾಗುತ್ತದೆ. 2.00 ಲಕ್ಷ ವಾರ್ಷಿಕ ಆದಾಯ ಮಿತಿಯುಳ್ಳವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 80 ರಡಿ ವೈಯಕ್ತಿಕವಾಗಿ ಜಮೀನುಖರೀದಿಸಲು ಉಪ ವಿಭಾಗಾಧಿಕಾರಿಗಳಿಂದ ಅನುಮತಿ ಪಡೆಯಬೇಕಾಗಿರುತ್ತದೆ.<br>ಕಲಂ 79ಎ ಮತ್ತು 79ಬಿ ಉಲ್ಲಂಘಿಸಿದ ಜಮೀನುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. |
| 19. | ಅಭಿಲೇಖಾಲಯ | ಕಾರ್ಯಾಲಯದ ಪ್ರತಿಯೊಂದು ಶಾಖೆಯಿಂದ ನಿರ್ವಹಣೆಗಾಗಿ ಕಛೇರಿ ಸಹಕಾರದಿಂದ ಬೇರೆ ಬೇರೆ ಬಾಕಿಯ ವಿಲೇಗಳ ಬೇರೆ ಬೇರೆ ವರ್ಗಗಳ ಕಾಗದ ಪತ್ರಗಳ ವ್ಯವಹಾರಗಳನ್ನು ಎಷ್ಟು ಕಾಲ ಕಾಯ್ದಿರಿಸಬೇಕೆಂಬುದನ್ನು ತಿಳಿದು ಈ ಕೆಳಕಾಣಿಸಿದ ಪ್ರಕಾರ ವಿಭಜನೆ ಮಾಡಲಾಗುವುದು ಹಾಗೂ ಶ್ರೇಣಿವಾರು ಹೊಂದಿಸಿ ಇಡಲಾಗುವದು.<br>1. ಎ.ಡಿಸ್ - ಅನಿರ್ದಿಷ್ಟಕಾಲ<br>2. ಬಿ.ಡಿಸ್ - ಮೂವತ್ತು ವರ್ಷ<br>3. ಸಿ. ಡಿಸ್ - ಹತ್ತು ವರ್ಷ<br>4. ಡಿ. ಡಿಸ್ - ಐದು ವರ್ಷ<br>5. ಇ.ಡಿಸ್ - ಒಂದು ವರ್ಷ ಮೇಲೆ ಕಾಣಿಸಿದ ವಿಲೇವಾರಿಗಳ ಅವಧಿ ಮುಗಿದ ನಂತರ ಕಛೇರಿಯ ಮುಖ್ಯಸ್ಥರ ಆದೇಶವನ್ನು ಪಡೆದು ಎ ಮತ್ತು ಬಿ ಡಿಸ್ ಗಳಲ್ಲಿನ ವಹಿಗಳನ್ನು ಹೊರತು ಪಡಿಸಿ ನಾಶಗೊಳಿಸಲಾಗುವುದು. |
| | | ಕಾರ್ಯಾಲಯದ ಪೀಠೋಪಕರಣಗಳ ಕಾರ್ಯ ನಿರ್ವಾಹಣೆ ಯಂತ್ರ ಸಾಮಗ್ರಿಗಳ ಖರೀದಿ ಮತ್ತು ದುರಸ್ತಿ ಕಾರ್ಯಾಲಯದ ವ್ಯವಹಾರಕ್ಕೆ ಅಗತ್ಯವಿರುವ ಲೇಖನ ಸಾಮಗ್ರಿ ಖರೀದಿ ಮತ್ತು ವಿತರಣೆ ಕಛೇರಿಯ ಸುವ್ಯವಸ್ಥೆ ವಿದ್ಯುದೀಕರಣ ನಿರ್ವಹಣೆ ವಿವಿಧ ಕಾಯ್ದೆ ಅಡಿ ಇರುವ ಎಲ್ಲಾ ಪುಸ್ತಕಗಳನ್ನು ಸುಸ್ಥಿತಿಯಲ್ಲಿ ಇಡುವುದು ಮತ್ತು ಸಂಬಂಧಪಟ್ಟ ವಿಷಯ ನಿರ್ವಾಹಕರು ಕಡತ ಬೇಕೆಂದು ಕೋರಿಕೆ ಚೀಟಿ ಸಲ್ಲಿಸಿದಾಗ ಸಂಬಂಧಪಟ್ಟ ಕಡತವನ್ನು ನೀಡುವುದು ಅಲ್ಲದೆ ಸಾರ್ವಜನಿಕರು ಕೋರುವ ದಾಖಲೆಗಳನ್ನು ನಿಯಮಾನುಸಾರ ನೀಡಲಾಗುವುದು. |

**ಬಿ.ಎನ್. ವರಪ್ರಸಾದ್ ರೆಡ್ಡಿ, ಕ.ಆ.ಸೇ.,**

ತಹಸೀಲ್ದಾರ್,

ಪಿ.ಆರ್.410

ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/157/ಡಿಟಿಸಿಆರ್/2007–08, ದಿನಾಂಕ:20ನೇ ಜೂನ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿಗಳು:** |
|---|---|
| ಪೊಲೀಸ್ ನಿರೀಕ್ಷಕರು,<br>ಜಿಲ್ಲಾ ಅಪರಾಧ ಗುಪ್ತ ವಾರ್ತಾ ವಿಭಾಗ,<br>ಮಂಗಳೂರು . | 1.ಟಿ.ಎ ಬಾಬು, ಬಿನ್: ಟಿ.ಕೆ ಅಯ್ಯಪ್ಪನ್<br>ತೋಟಂ ಪರಂಬಿಲ್ ಮನೆ, ಪಾಲರ್ ವೆಟ್ಟ,<br>ಪುಣತ್ತರ ಗ್ರಾಮ,ಕೊಚ್ಚಿನ್, ಕೇರಳ ರಾಜ್ಯ, (ವಾಹನ ಚಾಲಕ)<br>2. ರಾರ್ಬಟ್, ಬಿನ್ ದಿ:ಮಕೈಲ್,<br>ಪಾಲರ್ ವೆಟ್ಟ, ಪುಣತ್ತರ ಗ್ರಾಮ, ಕೊಚ್ಚಿನ್, ಕೇರಳ ರಾಜ್ಯ,<br>ಮತ್ತು ಇತರ ಒರ್ವ ಆರೋಪಿ. |

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ನಿರೀಕ್ಷಕರು, ಜಿಲ್ಲಾ ಅಪರಾಧ ಗುಪ್ತ ವಾರ್ತಾ ವಿಭಾಗ, ಮಂಗಳೂರು ಇವರು ದಿನಾಂಕ:08.09.2007 ರಂದು ಉಡುಪಿ ಮಂಗಳೂರು ರಾಷ್ಟ್ರೀಯ ಹೆದ್ದಾರಿಯಲ್ಲಿ ಪಣಂಬೂರು ಬೈಕಂಪಾಡಿ ಕಡೆಯಿಂದ ವಾಹನಗಳಲ್ಲಿ ಅಕ್ರಮವಾಗಿ ಕೇರಳ ರಾಜ್ಯಕ್ಕೆ ಮದ್ಯಸಾರ ಸಾಗಾಟ ನಡೆಯುತ್ತಿದ್ದೆ ಎಂದು ದೊರೆತ ಖಚಿತ ವರ್ತಮಾನದ ಮೇರೆಗೆ ತಮ್ಮ ಸಿಬ್ಬಂಧಿಗಳೊಂದಿಗೆ ಬೆಳಗ್ಗಿನ ಜಾವ 6–30 ಗಂಟೆ ಸಮಯಕ್ಕೆ ಪಣಂಬೂರು ಬೈಕಂಪಾಡಿ ದೀಪಕ್ ಪೆಟ್ರೋಲ್ ಬಂಕ್ ಬಳಿ ವಾಹನಗಳನ್ನು ತಪಾಸಣೆ ಮಾಡುತ್ತಿದ್ದಾಗ ಬೈಕಂಪಾಡಿ ಕೈಗಾರಿಕಾ ಕಡೆಯಿಂದ ಬರುತ್ತಿದ್ದ ಗೂಡ್ಸ್ ಟೆಂಪೋ ನೊಂದಣಿ ಸಂ: KL-11-D-2565 ಇದನ್ನು ತಪಾಸಣೆಗಾಗಿ ನಿಲ್ಲಿಸಿ ಪರಿಶೀಲನೆ ಕೈಗೊಂಡಾಗ, ಸದ್ರಿ ವಾಹನದಲ್ಲಿ ಕೇಟರಿಂಗ್‌ಗೆ ಸಂಬಂಧಿಸಿದ ಡೈನಿಂಗ್ ಟೇಬಲ್‌ಗಳು ಮತ್ತು ಕುರ್ಚಿಗಳ ಅಡಿಗಳಲ್ಲಿ ಪಾಲಿಥೀನ್ ಟಾರ್ಪಾಲ್‌ಗಳನ್ನು ಮುಚ್ಚಿ 35 ಲೀಟರು ಗಾತ್ರದ 80 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಒಟ್ಟು 2800.000 ಲೀಟರ್ ಮದ್ಯಸಾರ ಹೊಂದಿ ಸಾಗಾಟ ಮಾಡುತ್ತಿರುವುದನ್ನು ಪತ್ತೆ ಹಚ್ಚಿ , ಸದ್ರಿ ಮದ್ಯಸಾರ ಸಾಗಾಟ ಮಾಡಲು ಯಾವುದೇ ಅಧಿಕೃತ ದಾಖಲಾತಿಗಳ ಬಗ್ಗೆ ವಾಹನದಲ್ಲಿ ಇದ್ದ ಇಬ್ಬರು ವ್ಯಕ್ತಿಗಳಲ್ಲಿ ಕೇಳಲಾಗಿ, ಯಾವುದೇ ರಹದಾರಿ ಪತ್ರ ದಾಖಲೆಗಳು ಇಲ್ಲವೆಂದು ತಿಳಿಸಿದ್ದು, ಇದು ಅಕ್ರಮ ಮದ್ಯಸಾರ ಸಾಗಾಟವಾಗಿರುವುದರಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 1965ರ ಕಲಂ 14,15(1)ರ ಪ್ರಕಾರ ಅಪರಾಧ ಹಾಗೂ ಕಲಂ 32,34 ಮತ್ತು 43(3)ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸದ್ರಿ ವಾಹನ, ಮದ್ಯಸಾರ ಮತ್ತು ಈ ಕೆಳಕಂಡ ಎಲ್ಲಾ ಸೊತ್ತುಗಳನ್ನು ಪಂಚರ ಸಮಕ್ಷಮ ಜಪ್ತುಮಾಡಿ, ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ, ವಾಹನದಲ್ಲಿದ್ದ ಆರೋಪಿಗಳಾದ 1) ಟಿ.ಎ ಬಾಬು, ಬಿನ್ ಟಿ.ಕೆ ಅಯ್ಯಪ್ಪನ್, ತೋಟಂ ಪರಂಬಿಲ್ ಮನೆ, ಪಾಲರ್‌ವೆಟ್ಟ, ಪುನಿತ್ತರಗ್ರಾಮ,ಕೊಚ್ಚಿನ್,ಕೇರಳರಾಜ್ಯ, (ವಾಹನ ಚಾಲಕ) ರಾಬರ್ಟ್, ಬಿನ್: ದಿ:ಮಕೈಲ್, ಪಾಲರ್ ವೆಟ್ಟ, ಪುನಿತ್ತರ ಗ್ರಾಮ, ಕೇರಳ ರಾಜ್ಯ, ಇವರುಗಳ ವಿರುದ್ದ ಪೊಲೀಸ್ ಉಪ ನಿರೀಕ್ಷಕರು, ಪಣಂಬೂರು ಪೊಲೀಸ್ ಠಾಣಾ,ಪಣಂಬೂರು ಇವರ ತಕ್ಸೀರು ಸಂಖ್ಯೆ:116/2007, ದಿನಾಂಕ:08.09.2007 ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ, ಮಹಜರು ಮತ್ತು ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಈ ಪ್ರಾಧಿಕಾರದ ಆದೇಶದ ಮೇರೆಗೆ ಸೊತ್ತು ಮತ್ತು ಕಡತವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸುವರೇ ಪೊಲೀಸ್ ಉಪನಿರೀಕ್ಷಕರು, ಪಣಂಬೂರು ಪೊಲೀಸ್ ಠಾಣಾ, ನವಮಂಗಳೂರು ಇವರು ಪ್ರಾಧಿಕಾರದಲ್ಲಿ ಅನುಮತಿ ಕೋರಿದ ಮೇರೆಗೆ ಪ್ರಾದಿಕಾರದ ದಿನಾಂಕ:13.11.2007ರ ಆದೇಶದಲ್ಲಿ ಸೊತ್ತುಗಳನ್ನು ಅಬಕಾರಿ ಉಪನಿರೀಕ್ಷಕರು, ಜಾರಿ ಮತ್ತು ತನಿಖೆ, ಮಂಗಳೂರುಉತ್ತರ ಇವರಿಗೆ ಹಸ್ತಾಂತರಿಸಲು ಅದೇಶಿಸಲಾಗಿರುತ್ತದೆ. ಆ ಪ್ರಕಾರ ಮೊಕದ್ದಮೆಗೆ ಸಂಬಂಧಿಸಿ ಸೊತ್ತು ಹಾಗೂ ಕಡತಗಳನ್ನು ಅಬಕಾರಿಉಪನಿರೀಕ್ಷಕರು(1), ಮಂಗಳೂರು ಉತ್ತರ ವಲಯ–I ಇವರಿಗೆ ಹಸ್ತಾಂತರಿಸಲಾಗಿರುತ್ತದೆ.

**ಸೊತ್ತುಗಳ ವಿವರ**

1) ಗೂಡ್ಸ್ ಟೆಂಪೋ 609 ನೊಂದಣಿ ಸಂ: KL-11D-2565
2) ತಲಾ 35 ಲೀಟರಿನ 80 ಬಿಳಿ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಪೂರ್ಣ ಪ್ರಮಾಣದಲ್ಲಿ ತುಂಬಿಸಲಾದ ಮದ್ಯಸಾರ–2800 ಲೀಟರು

(ಸದ್ರಿ ಮದ್ಯಸಾರದಿಂದ ತಲಾ 1 ಲೀಟರಿನ ಮೂರು ಕ್ಯಾನುಗಳಲ್ಲಿ ಮದ್ಯಸಾರವನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಮಾದರಿ ತೆಗೆಯಲಾಗಿದೆ)

3) ಬಿಳಿ ಪಾಲಿಥೀನ್ ಟರ್ಪಾಲ್ –1
4) ಪ್ಲಾಸ್ಟಿಕ್ ಕುರ್ಚಿಗಳು–60

5) ಕಬ್ಬಿಣದ ಟೇಬಲ್ ಸ್ಟಾಂಡ್ ಗಳು–30

6) ಮೇಜಿನ ಹಲಗೆಗಳು–36

7) ನೈಲಾನ್ ಹಗ್ಗ–1

ತಕ್ಷೀರಿನಲ್ಲಿ ವಶಪಡಿಸಿಕೊಂಡ ಗೂಡ್ಸ್ ಟೆಂಪೋ ನೊಂದಣಿ ಸಂ:KL-11-D-2565 ರ ನೊಂದಾಣಿ ಮಾಲೀಕರೆಂದು ಹೇಳಿಕೊಂಡ ಶ್ರೀ ಮುರುಳೀಧರನ್ ಬಿನ್:ಮಾಧವನ್, 7/571 ಕರತ್ತ್ ಪರಂಬಿಲ್ ಹೌಸ್, ಐಯನ್ ತೋಲೆ, ತ್ರಿಶೂರ್, ಕೇರಳ ರಾಜ್ಯ ಇವರ ಪರ ಜಿ.ಪಿ.ಎದಾರರಾದ ಶ್ರೀ ವಿ.ಜಿ. ಬಿಂದಾಸ್ ಬಿನ್ ಗೋಪಾಲನ್, ವೆಲತ್ತಕ್ಕಿ ಹೌಸ್, ಒಳಪಾಡು ಅಂಚೆ, ತ್ರಿಶೂರ್, ಕೇರಳ ರಾಜ್ಯ ಇವರು ದಿನಾಂಕ:18.01.2008ರಂದು ಅಂದಿನ ಅಧಿಕೃತ ಅಧಿಕಾರಿಗಳು ಮತ್ತು ಅಬಕಾರಿ ಅಧೀಕ್ಷಕರು, ಇಐಬಿ, ದ.ಕ ಜಿಲ್ಲೆ ಮಂಗಳೂರುರವರ ಪ್ರಾಧಿಕಾರದಲ್ಲಿ ತಮ್ಮ ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸಿ ವಾಹನ ಮತ್ತು ಕೇಟರಿಂಗ್ ಸೊತ್ತುಗಳ ಮಧ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ. ಸದ್ರಿ ಅರ್ಜಿಯನ್ನು ಪರಿಶೀಲಿಸಿ ವಾಹನ ಮಧ್ಯಂತರ ಬಿಡುಗಡೆ ಬಗ್ಗೆ ತಮ್ಮ ಆಕ್ಷೇಪಣೆಗಳನ್ನು ಸಲ್ಲಿಸುವಂತೆ ಸಹಾಯಕ ಅಭಿಯೋಗ ನಿರ್ದೇಶಕರು ಹಾಗೂ ಪ್ರಕರಣದ ತನಿಖಾಧಿಕಾರಿಗಳಿಗೆ ಪ್ರಾಧಿಕಾರದಿಂದ ದಿನಾಂಕ:21.01.2008ರಂದು ನೋಟಿಸುಗಳನ್ನು ನೀಡಲಾಗಿದ್ದು, ದಿನಾಂಕ:14.02.2008 ರಂದು ಪ್ರಕರಣದ ತನಿಖಾಧಿಕಾರಿಗಳಿಂದ ಹಾಗೂ ದಿನಾಂಕ:18.03.2008 ರಂದು ಸರ್ಕಾರಿ ಅಭಿಯೋಜಕರಿಂದ ಆಕ್ಷೇಪಣೆಗಳು ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುತ್ತದೆ.

ಮೊಕದ್ದಮೆಯ ತನಿಖೆಯನ್ನು ಪೊಲೀಸ್ ಉಪ ನಿರೀಕ್ಷಕರು, ಪಣಂಬೂರು ಪೊಲೀಸ್ ಠಾಣೆ ಇವರು ಮುಂದುವರಿಸಿ ಪ್ರಕರಣದಲ್ಲಿ ಜಪ್ತಾದ ಮದ್ಯಸಾರದ ಮಾದರಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ,ವಿಶ್ಲೇಷಣಾ ವರದಿಯನ್ನು ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉತ್ತರ ವಲಯ–I ಇವರಿಗೆ ನೀಡಿರುತ್ತಾರೆ. ಸದ್ರಿ ರಾಸಾಯನಿಕ ಪರೀಕ್ಷಾ ಫಲಿತಾಂಶದ ವರದಿಯಲ್ಲಿ ವಶಪಡಿಸಿಕೊಂಡ ಮದ್ಯಸಾರದಲ್ಲಿ ಮದ್ಯಸಾರದ ಪ್ರಮಾಣ 93.0% ಇರುವುದಾಗಿ ದೃಢೀಕರಣ ನೀಡಿರುತ್ತಾರೆ. ಸದ್ರಿ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನ ಮತ್ತು ಇತರ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲು ಅಬಕಾರಿ ಉಪ ನಿರೀಕ್ಷಕರು(1), ಮಂಗಳೂರು ಉತ್ತರ ವಲಯ–I ಇವರು ದಿನಾಂಕ:08.02.2008ರಂದು ಶಿಫಾರಸ್ಸು ಮಾಡಿ ವರದಿ ಸಲ್ಲಿಸಿರುತ್ತಾರೆ. ಆ ಪ್ರಕಾರ ಪ್ರಕರಣದಲ್ಲಿ ಜಪ್ತಾದ ಸೊತ್ತುಗಳ ಪೈಕಿ ವಾಹನವನ್ನು ಹೊರತುಪಡಿಸಿ, ಉಳಿದ 2800.000 ಲೀಟರು ಮದ್ಯಸಾರ (ಮಾದರಿಗಳನ್ನು ಹೊರತು ಪಡಿಸಿ)ವನ್ನು ಮತ್ತು ಇತರ ಸೊತ್ತುಗಳನ್ನು ಪ್ರಾಧಿಕಾರದ ದಿನಾಂಕ:08.09.2008 ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯಸಾರವನ್ನು ಸೂಕ್ತ ಮಹಜರು ಜರುಗಿಸಿ ನಾಶಪಡಿಸಲಾಗಿರುತ್ತದೆ.

ವಾಹನದ ನೊಂದಣಿ ಮಾಲೀಕರ ಪರ ಜಿ.ಪಿ.ಎ ದಾರರು ವಾಹನದ ಮಧ್ಯಂತರ ಬಿಡುಗಡೆಗಾಗಿ ಸಲ್ಲಿಸಿದ್ದ ಅರ್ಜಿಯ ಬಗ್ಗೆ ಪರಿಶೀಲನೆ ನಡೆಸಿ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದ.ಕ ಜಿಲ್ಲೆ ಮಂಗಳೂರು ಇವರು ದಿನಾಂಕ:24.03.2008ರಂದು ಹೊರಡಿಸಿದ ಆದೇಶದಲ್ಲಿ ರೂ.1,10,000/– ಮೌಲ್ಯದ ಬ್ಯಾಂಕ್ ಗ್ಯಾರೆಂಟಿಯನ್ನು ಹಾಗೂ ಇತರೆ ಷರತ್ತುಗಳ ಮೇಲೆ ವಾಹನವನ್ನು ಆರ್.ಸಿ ಮಾಲೀಕರ ಪರ ಮಧ್ಯಂತರ ಬಿಡುಗಡೆಗೊಳಿಸಿ ಆದೇಶಿಸಿರುತ್ತಾರೆ. ಆದರೆ ವಾಹನದ ಮಾಲೀಕರಾಗಲೀ, ಮಾಲೀಕರ ಪರ ಜಿ.ಪಿ.ಎದಾರರಾಗಲೀ ಸದ್ರಿ ಆದೇಶದ ಷರತ್ತುಗಳಿಗನುಗುಣವಾಗಿ ವಾಹನದ ಮಧ್ಯಂತರ ಬಿಡುಗಡೆ ಪಡೆದುಕೊಳ್ಳುವ ಬಗ್ಗೆ ಆಸಕ್ತಿ ತೋರಿಸಿರುವುದಿಲ್ಲ.

ಪ್ರಕರಣದಲ್ಲಿ ಜಪ್ತಾದ ವಾಹನ ಗೂಡ್ಸ್ ಟೆಂಪೋ ನೊಂದಣಿ ಸಂ: KL-11-D-2565 ಇದರ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ಜಂಟಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ತ್ರಿಶೂರ್ ಕೇರಳ ಇವರಿಂದ ಪಡೆಯಲಾಗಿದ್ದು,ಸದ್ರಿ ವರದಿಯ ಪ್ರಕಾರ ಶ್ರೀ.ಮುರುಳೀಧರನ್, ಬಿನ್: ಮಾಧವನ್ ,7/571 ಕರತ್ತ್ ಪರಂಬಿಲ್ ಹೌಸ್, ಐಯನ್ ತೋಲೆ, ತ್ರಿಶೂರ್, ಕೇರಳ ರಾಜ್ಯ ಇವರು ದಿನಾಂಕ:02.03.2007ರಿಂದ ಅನ್ವಯವಾಗುವಂತೆ ವಾಹನದ ಮಾಲೀಕರಾಗಿರುವುದಾಗಿ ಹಾಗೂ ಸೂಪರ್ ಫೈನಾನ್ಸ್, ಪುತ್ತೂರು ಅಂಚೆ, ಕೇರಳ ರಾಜ್ಯ ಇವರು ವಾಹನದ ಹೆಚ್.ಪಿ.ಎ. ದಾರರಾಗಿರುವುದಾಗಿ ತಿಳಿದು ಬಂದಿರುತ್ತದೆ. ವಾಹನದ ಮಾಲೀಕರಿಗೆ ಮತ್ತು ಹೆಚ್.ಪಿ.ಎ. ದಾರರಿಗೆ ದಿನಾಂಕ:15.01.2009ರಂದು ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಬಿ ಪ್ರಕಾರ ನೀಡಲಾದ ಕಾರಣ ಕೇಳಿ ನೋಟಿಸುಗಳನ್ನು ವಾಹನದ ಮಾಲೀಕರಿಗೆ ಜ್ಯಾರಿಯಾಗದೇ ಅಂಚೆ ಷರಾದೊಂದಿಗೆ ವಾಪಸ್ಸು ಬಂದಿರುತ್ತದೆ. ಹಾಗೂ ಹೆಚ್.ಪಿ.ಎ. ದಾರರಿಗೆ ನೀಡಲಾದ ಕಾರಣ ಕೇಳಿ ನೋಟಿಸು ದಿನಾಂಕ:21.01.2009ರಂದು ಜ್ಯಾರಿಯಾಗಿದ್ದು, ಈ ಬಗ್ಗೆ ಅಂಚೆ ಸ್ವೀಕೃತ ಪತ್ರ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುತ್ತದೆ.

ಮೇಲಿನ ವಿದ್ಯಾಮಾನಗಳನ್ನು ಅವಲೋಕಿಸಿ ವಾಹನದ ಮುಟ್ಟುಗೋಲು ನಡವಳಿ ವಿಚಾರಣೆಯನ್ನು ಪ್ರಾರಂಬಿಸಿ ಸರ್ಕಾರದ ಪರ ಸಾಕ್ಷಿಧಾರರನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಪ್ರತಿರಕ್ಷಾ ಸಾಕ್ಷಿಗಳು ಇಲ್ಲದೇ ಇರುವುದರಿಂದ ಪ್ರತಿ ರಕ್ಷಾ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಿಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ:08.09.2007 ರಂದು ಗೂಡ್ಸ್ ಟೆಂಪೋ ನೊಂದಣಿ ಸಂ: KL-11D-2565 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ 2,800 ಲೀಟರು ಮದ್ಯಸಾರವನ್ನು ಸಾಗಾಣಿಕೆ ಮಾಡಲಾಗಿದೆಯೇ?
2) ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು, ತನಗೆ ತಿಳಿಯದೇ ಅಕ್ರಮ ಮದ್ಯಸಾರ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದಾರೆಯೇ?
3) ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಒಂದನೇ ಅಂಶವನ್ನು ಗುಣತ್ಮಾಕವಾಗಿ, ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:**

ಶ್ರೀ.ವಿನೋದ್ ಕುಮಾರ್, ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉತ್ತರ ವಲಯ–I ರವರು ದಿನಾಂಕ:03.06.2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಇವರು ಪ್ರಕರಣದ ತನಿಖಾಧಿಕಾರಿಯವರಾಗಿದ್ದು, ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ಕಳೆದ ಮೂರು ವರ್ಷಗಳಿಂದ ಅಬಕಾರಿ ಉಪ ನಿರೀಕ್ಷಕನಾಗಿ ಮಂಗಳೂರು ಉತ್ತರ ವಲಯ–1ರಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಪೊಲೀಸ್ ಉಪ ನಿರೀಕ್ಷಕರು, ಪಣಂಬೂರು ಇವರ ಕ್ರೈಂ ಸಂ:116/2007 ದಿನಾಂಕ:08.09.2007ರಂದು ದಾಖಲಿಸಿದ ಮೊಕದ್ದಮೆಯ ಸೊತ್ತುಗಳಾದ ಗೂಡ್ಸ್ ಟೆಂಪೋ ನೊಂದಣಿ ಸಂ: KL-11D-2565 ಮತ್ತು ಅದರಲ್ಲಿದ್ದ 35 ಲೀಟರಿನ 85 ಕ್ಯಾನುಗಳಲ್ಲಿ ಒಟ್ಟು 2800 ಲೀಟರು ಮದ್ಯಸಾರವನ್ನು ದಿನಾಂಕ:14.11.2007ರಂದು ತನ್ನ ಸುಪರ್ಧಿಗೆ ಪಡೆದುಕೊಂಡಿರುತ್ತೇನೆಂದು ನುಡಿದಿರುತ್ತಾರೆ. ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ದಿನಾಂಕ:26.11.2007ರಂದು ಆದೇಶಿಸಿರುವಂತೆ, ಪ್ರಕರಣಕ್ಕೆ ಸಂಬಂಧಿಸಿದ ಸೊತ್ತುಗಳಾದ ವಾಹನ ನೊಂದಣಿ ಸಂ:KL-11D-2565 ಗೂಡ್ಸ್ ಟೆಂಪೋ ಮತ್ತು 80 ಕ್ಯಾನುಗಳಲ್ಲಿದ್ದ 2800 ಲೀ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ನಡವಳಿ ನಡೆಸುವ ಬಗ್ಗೆ ವರದಿ ಒಪ್ಪಿಸಲು ಆದೇಶಿಸಿದಂತೆ ದಿನಾಂಕ:08.02.2009ರಂದು ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತೇನೆ. ಸದ್ರಿ ವರದಿಯನ್ನು ನಿಶಾನೆ ಪಿ–1 ಎಂದು ಗುರುತಿಸಲಾಗಿರುತ್ತದೆ. ಅಧಿಕೃತ ಅಧಿಕಾರಿಗಳ ದಿನಾಂಕ: 08.09.2008ರ ಆದೇಶದ ಮೇರೆಗೆ ದಿನಾಂಕ:24.09.2008ರಂದು ಮಹಜರು ಮೂಲಕ ಮದ್ಯಸಾರವನ್ನು ನಾಶಪಡಿಸಿರುತ್ತೇನೆ. ನಾಶಪಡಿಸಿ ಉಳಿದ ಕ್ಯಾನುಗಳನ್ನು ಬಹಿರಂಗ ಹರಾಜು ಮೂಲಕ ಮಾರಾಟ ಮಾಡಿರುತ್ತೇನೆಂದು ತಮ್ಮ ಸಾಕ್ಷವನ್ನು ನೀಡಿರುತ್ತಾರೆ.

ವಿಚಾರಣಾ ಸಂದರ್ಭದಲ್ಲಿ ವಾಹನದ ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪಾಟೀಸವಾಲು ಇಲ್ಲವೆಂದು ಪರಿಗಣಿಸಿ ಸಾಕ್ಷಿ ವಿಚಾರಣೆಯನ್ನು ಮುಕ್ತಾಯಗೊಳಿಸಲಾಗಿರುತ್ತದೆ.

ಪ್ರಕರಣ ಪತ್ತೆ ಹಚ್ಚಿದ ಪೊಲೀಸ್ ನಿರೀಕ್ಷಕರು, ಜಿಲ್ಲಾ ಅಪರಾಧ ಗುಪ್ತ ವಾರ್ತಾವಿಭಾಗ ಇವರಿಗೆ ದಿನಾಂಕ:18.03.2009ರಂದು ಪ್ರಾ.ಸಾ–1 ರವರಾಗಿ ಪ್ರಾಧಿಕಾರದ ಮುಂದೆ ಹಾಜರಾಗುವಂತೆ ನೋಟಿಸು ನೀಡಲಾಗಿದ್ದು ,ಸದ್ರಿಯವರು ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಅಭಿಯೋಗದ ಪರ ಸದ್ರಿಯವರ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ. ಹಾಗೂ ಸದ್ರಿಯವರ ಸಾಕ್ಷಿಗಾಗಿ ಪ್ರಕರಣವನ್ನು ಮುಂದೂಡಿದ್ದಲ್ಲಿ ಮುಟ್ಟುಗೋಲು ನಡವಳಿ ವಿಳಂಭವಾಗುವ ಸಾಧ್ಯತೆಯಿರುವುದರಿಂದ ಹಾಗೂ ವಾಹನದ ಮಾಲೀಕರಾಗಲೀ, ಮಾಲೀಕರ ಪರ ವಕೀಲರಾಗಲೀ ಪ್ರಕರಣವನ್ನು ನಡೆಸುವ ಬಗ್ಗೆ ಉತ್ಸುಕರಾಗದೇ ಇರುವುದರಿಂದ ಪ್ರಕರಣದಲ್ಲಿ ಮುಂದಿನ ವಿಚಾರಣೆ ಅನಾವ್ಯಶಕವೆಂದು ಪ್ರಾಧಿಕಾರ ಮನಗಂಡು ವಿಚಾರಣೆಯನ್ನು ಮುಕ್ತಾಯಗೊಳಿಸಲು ತೀರ್ಮಾನಿಸಿದೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಫ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷಧಾರಗಳೊಂದಿಗೆ ಸಾಭೀತು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ಸಿ ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಾಗಿರುವ ದಾಖಲಾತಿಗಳ ಪ್ರಕಾರ ದಿನಾಂಕ:08.09.2007 ರಂದು ವಾಹನ ನೊಂದಣಿ ಸಂ: KL-11-D-2565 ಗೂಡ್ಸ್ ಟೆಂಪೋ ಇದರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಚಾಲಕ ಮತ್ತು ಇನ್ನೊರ್ವ ವ್ಯಕ್ತಿ ಟೇಬಲ್, ಕುರ್ಚಿ ಇತ್ಯಾದಿ ಕೇಟರಿಂಗ್ ಸೊತ್ತುಗಳ ಅಡಿಯಲ್ಲಿ 35 ಲೀಟರು ಗಾತ್ರದ 80 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಒಟ್ಟು 2800 ಲೀ ಮದ್ಯಸಾರವನ್ನು ಪಾಲಿಥೀನ್ ಟರ್ಪಾಲ್ ಮರೆಮಾಡಿ ಸಾಗಾಟ ಮಾಡುತ್ತಿದ್ದುದನ್ನು ಪೊಲೀಸ್ ನಿರೀಕ್ಷಕರು, ಜಿಲ್ಲಾ ಅಪರಾಧ ಗುಪ್ತ ವಾರ್ತ ವಿಭಾಗರವರು ಪತ್ತೆಹಚ್ಚಿ, ಪಣಂಬೂರು ಪೊಲೀಸ್ ಠಾಣಾ ಕ್ರೈಂ ಸಂ:116/2007–08

ದಿನಾಂಕ:08.09.2007ರ ಪ್ರಕಾರ ಪ್ರಕರಣ ದಾಖಲಿಸಿಕೊಂಡು ಅಕ್ರಮ ಮದ್ಯಸಾರ ಸಾಗಾಣಿಕೆಗೆ ಬಳಸಲಾದ ವಾಹನ, ಮದ್ಯಸಾರ ಮತ್ತು ಇತರ ಸೊತ್ತುಗಳನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನಾ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ಮದ್ಯಸಾರದ ಮಾದರಿಗಳು ರಾಸಾಯನಿಕ ತಜ್ಞರ ವರದಿಯಂತೆ ಮದ್ಯಸಾರ ವೆಂದು ದೃಢಪಟ್ಟಿರುವುದರಿಂದ, ಕರ್ನಾಟಕ ಅಬಕಾರಿ ಕಾಯಿದೆ ಕಲಂ 14,15(1) ರ ಪ್ರಕಾರ ಅಪರಾಧ ಹಾಗೂ 32, 34, 35 ಮತ್ತು 43(3)ರ ಪ್ರಕಾರ ಶಿಕ್ಷಾರ್ಹ ಅಪರಾಧ ಎಸಗಿರುವುದರಿಂದ ಹಾಗೂ ವಾಹನದ ಮಾಲೀಕರು ಈ ಪ್ರಾಧಿಕಾರದಿಂದ ವಾಹನದ ಮಧ್ಯಂತರ ಬಿಡುಗಡೆಗೆ ಹೊರಡಿಸಿರುವ ದಿನಾಂಕ:24.03.2008ರ ಅದೇಶದ ಷರತ್ತುಗಳನ್ವಯ ಕಾನೂನು ರೀತ್ಯಾ ವಾಹನವನ್ನು ತನ್ನ ಸುಪರ್ದಿಗೆ ಪಡೆದುಕೊಳ್ಳಲು ವಿಫಲರಾಗಿರುವುದರಿಂದ ವಾಹನದ ಮಾಲೀಕರು ತನ್ನ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಗೆ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ಮನಗಂಡು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನ ನೊಂದಣಿ ಸಂ:KL-11-D-2565 ಗೂಡ್ಸ್ ಟೆಂಪೋ ಇದರ ಮಾಲೀಕನೆಂದು ಹೇಳಿಕೊಂಡ ಶ್ರೀ ಮುರಳೀಧರನ್ ಎಂಬವನು ತಾನು ವಾಹನದ ಮಾಲೀಕನೆಂದು ಹೇಳಿಕೊಂಡು ತನ್ನ ಜಿ.ಪಿ.ಎ.ದಾರನ ಮೂಲಕ ವಾಹನದ ಮದ್ಯಂತರ ಬಿಡುಗಡೆಗಾಗಿ ಅರ್ಜಿಯನ್ನು ಸಲ್ಲಿಸಿದ್ದು, ಸದ್ರಿ ಅರ್ಜಿಯನ್ನು ಪರಿಗಣಿಸಿ ಪ್ರಾಧಿಕಾರದಿಂದ ವಾಹನದ ಮದ್ಯಂತರ ಬಿಡುಗಡೆಗೆ ದಿನಾಂಕ:24.03.2008ರಂದು ಆದೇಶವಾಗಿದ್ದರೂ ತದನಂತರದಲ್ಲಿ ವಾಹನದ ಮದ್ಯಂತರ ಬಿಡುಗಡೆ ಆದೇಶದ ಷರತ್ತುಗಳನ್ನು ಪಾಲಿಸಿ ವಾಹನವನ್ನು ಮದ್ಯಂತರ ಸುಪರ್ದಿಗೆ ಪಡೆದುಕೊಳ್ಳಲು ಮುಂದೆ ಬಾರದಿರುವುದು ಮತ್ತು ಕಾನೂನು ರೀತ್ಯಾ ಪ್ರಯತ್ನ ಮಾಡದಿರುವುದನ್ನು ಗಮನಿಸಿದಾಗ ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನದಲ್ಲಿದ್ದ ಆರೋಪಿತ ವ್ಯಕ್ತಿಗಳು ಮತ್ತು ವಾಹನದ ಮಾಲೀಕರ ಶಾಮೀಲಾತಿ ಹಾಗೂ ತಿಳುವಳಿಕೆಯಿಂದಲೇ ವಾಹನದಲ್ಲಿ ಅಕ್ರಮ ಮದ್ಯಸಾರ ಸಾಗಾಣಿಕೆಗೆ ಬಳಸಿರುವುದು, ಅಲ್ಲದೇ ವಾಹನದ ಮದ್ಯಂತರ ಬಿಡುಗಡೆಗೆ ಆದೇಶವಾಗಿದ್ದರೂ ವಾಹನವನ್ನು ತಮ್ಮ ಮದ್ಯಂತರ ಸುಪರ್ದಿಗೆ ಪಡೆಯಲು ನಿರಾಸಕ್ತರಾಗಿರುವುದು ಮತ್ತು ತಕ್ಷೀರು ವಿಚಾರಣಾ ಸಮಯದಲ್ಲಿ ವಾಹನದ ಮಾಲೀಕರಾಗಲೀ, ಮಾಲೀಕರ ಪರ ವಕೀಲರಾಗಲೀ ಪ್ರಾಧಿಕಾರದಲ್ಲಿ ಹಾಜರಾಗಿ ತಕ್ಷೀರನ್ನು ನಡೆಸಲು ಉತ್ಸುಕರಾಗಿರದೇ ಇರುವುದರಿಂದ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿಯಲ್ಲಿ ಅಂತಿಮ ತೀರ್ಮಾನ ತೆಗೆದು ಕೊಳ್ಳಬೇಕಾಗಿರುತ್ತದೆ. ಪೊಲೀಸ್ ನಿರೀಕ್ಷಕರು, ಜಿಲ್ಲಾ ಅಪರಾಧ ಗುಪ್ತ ವಾರ್ತಾವಿಭಾಗ, ಮಂಗಳೂರುರವರು ಸದ್ರಿ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಹಚ್ಚಿ, ಸ್ಥಳ ಮಹಜರಿನ ಮೂಲಕ ಸಾಗಾಣಿಕೆಗೆ ಬಳಸಿದ ವಾಹನವನ್ನು ಹಾಗೂ ಅಕ್ರಮ ಮದ್ಯಸಾರ ಮತ್ತು ಇತರ ಸೊತ್ತುಗಳನ್ನು ಜಪ್ತು ಪಡಿಸಿರುವುದು ಮತ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಜಪ್ತು ಪಡಿಸಲಾದ 2800 ಲೀಟರು ಅಬಕಾರಿ ಸೊತ್ತು ಮದ್ಯಸಾರ ಎಂದು ದೃಡೀಕೃತವಾಗಿರುವುದರಿಂದ ಇದು ಅಕ್ರಮವಾಗಿ ಮದ್ಯಸಾರವನ್ನು ವಾಹನದಲ್ಲಿ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಈ ಮೇಲಿನ ಎಲ್ಲಾ ದಾಖಲಾತಿಗಳಿಂದ ಸಾಬೀತಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಪೊಲೀಸ್ ನಿರೀಕ್ಷಕರು, ಜಿಲ್ಲಾ ಅಪರಾಧ ಗುಪ್ತ ವಾರ್ತಾ ವಿಭಾಗ, ಮಂಗಳೂರು ಇವರು ವಶಪಡಿಸಿಕೊಂಡ ವಾಹನ ನೊಂದಣಿ ಸಂ:KL-11-D-2565 ಗೂಡ್ಸ್ ಟೆಂಪೋವನ್ನು ವಶಪಡಿಸಿಕೊಂಡು ಸುಮಾರು ಒಂದು ವರ್ಷ ಒಂಭತ್ತು ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ಆದರೆ ಯಾವುದೇ ವ್ಯಕ್ತಿಯು ಸೂಕ್ತ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ, ವಾಹನದ ಮಾಲೀಕತ್ವದ ಬಗ್ಗೆ ಹಾಗೂ ತನ್ನ ನಿರಾಪರಾಧಿತ್ವದ ಬಗ್ಗೆ ರುಜುವಾತು ಪಡಿಸಿಕೊಂಡಿರುವುದಿಲ್ಲ. ಕಾರಣ ಅಕ್ರಮ ಮದ್ಯಸಾರ ಸಾಗಾಣಿಕೆಗೆ ಬಳಸಿದ ವಾಹನ ನೊಂದಣಿ ಸಂ:KL-11-D-2565 ಗೂಡ್ಸ್ ಟೆಂಪೋವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡುಬಂದ ಹಿನ್ನಲೆಯಲ್ಲಿ ಈ ಕೆಳಕಂಡ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ನಿರೀಕ್ಷಕರು, ಜಿಲ್ಲಾ ಅಪರಾಧ ಗುಪ್ತ ವಾರ್ತಾ ವಿಭಾಗ, ಮಂಗಳೂರು ಇವರ ಕ್ರೈಂ ಸಂ:116/2007–08, ದಿನಾಂಕ:08.09.2007 ರಲ್ಲಿ ಅಕ್ರಮ ಮದ್ಯಸಾರ ಸಾಗಾಣಿಕೆಗೆ ಬಳಸಿದ KL-11-D-2565 (ಚಾಸೀಸ್ ಸಂಖ್ಯೆ: 379045CUQ807319 ಮತ್ತು ಇಂಜಿನ್ ಸಂಖ್ಯೆ: 497D21CUQ720167) ಗೂಡ್ಸ್ ಟೆಂಪೋ ವನ್ನು ಕರ್ನಾಟಕ ಅಬಕಾರಿ ಖಾಯ್ದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:20.06.2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ–I: ಶ್ರೀ ವಿನೋದ್ ಕುಮಾರ್, ಅಬಕಾರಿ ನಿರೀಕ್ಷಕರು, ಮಂಗಳೂರು ಉತ್ತರ ವಲಯ–I

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ–I : ಸೊತ್ತುಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅದೀಕ್ಷಕರಿಗೆ ದಿನಾಂಕ:08.02.2008ರಂದು ಸಲ್ಲಿಸಿದ ವರದಿ.

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

**ಅರ್ಜಿದಾರರ ಹೇಳಿಕೆ :** – ಯಾವುದು ಇಲ್ಲ–

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :** – ಯಾವುದು ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.625

**ಸಹಕಾರ ಇಲಾಖೆ**

**ಸಹಕಾರಿಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಕಾರ್ಯವಾಹಿಗಳು**

**ಅಮಲ್ಜಾರಿ ಸಂಖ್ಯೆ: 286/2004–2005**

**ವಿಷಯ:** ಶ್ರೀ ಚಿಕ್ಕಣ್ಣಸ್ವಾಮಿ ಬಿನ್ ಹೆಚ್.ಸಿ. ಚಿಕ್ಕಹನುಮಯ್ಯ ತುಮಕೂರು ಇವರ ಸ್ಥಿರಾಸ್ತಿಯನ್ನು ಸೇಕ್ರಡ್ ಹಾರ್ಟ್ ಸೌಹಾರ್ದ ಕ್ರೆಡಿಟ್ ಕೋ ಆಪರೇಟಿವ್ ಲಿ., ತುಮಕೂರು, ಈ ಸಹಕಾರಿ ಹೆಸರಿಗೆ ವರ್ಗಾಯಿಸಿ, ಸ್ಥಿರೀಕರಣ ಆದೇಶ ನೀಡುವ ಬಗ್ಗೆ.

**ಉಲ್ಲೇಖ:** 1) ಮಾರಾಟಾಧಿಕಾರಿಗಳು, ಸೆಕ್ರೆಡ್ ಹಾರ್ಟ್ ಸೌಹಾರ್ದ ಕ್ರೆಡಿಟ್ ಕೋಆಪರೇಟಿವ್ ನಿ., ತುಮಕೂರು ಇವರ ಪತ್ರದ ದಿನಾಂಕ:20.05.2006.

2) ಕರ್ನಾಟಕ ಗೌರವ ಮೇಲ್ಮನವಿ ನ್ಯಾಯಾಧೀಕರಣ ಬೆಂಗಳೂರುರವರ ಆದೇಶ ಸಂಖ್ಯೆ: ಅಪೀಲು ನಂ.450/06, ದಿನಾಂಕ:11.06.2007.

3) ವ್ಯವಸ್ಥಾಪಕರು ಸೆಕ್ರೆಡ್ ಹಾರ್ಟ್ ಸೌಹಾರ್ದ ಕ್ರೆಡಿಟ್ ಕೋಆಪರೇಟಿವ್ ನಿ., ತುಮಕೂರು ಇವರ ಪತ್ರದ ದಿನಾಂಕ:26.02.2009.

4) ಈ ಕಛೇರಿಯಿಂದ ಕರ್ನಾಟಕ ಸೌಹಾರ್ದ ಸಹಕಾರಿ ನಿಯಮ 2004ರ ನಿಯಮ 18(3)ರ ಪ್ರಕಾರ ನೀಡಲಾದ ನೋಟಿಸು ದಿನಾಂಕ:05.03.2009.

**ಪ್ರಸ್ತಾವನೆ:**

ಶ್ರೀ ಚಿಕ್ಕಣ್ಣಸ್ವಾಮಿ ಬಿನ್ ಹೆಚ್.ಸಿ. ಚಿಕ್ಕಹನುಮಯ್ಯ, ಹೊಸಬಡಾವಣೆ, ದೇವರಾಯಪಟ್ಟಣ, ತುಮಕೂರು ಇವರು ಸೆಕ್ರೆಡ್ ಹಾರ್ಟ್ ಪತ್ತಿನ ಸಹಕಾರ ಸಂಘ ನಿ., ತುಮಕೂರು ಇದರಲ್ಲಿ ಸಾಲ ಪಡೆದಿದ್ದು, ರೂ.3,48,777=00ಗಳ ಸಾಲ ಬಾಕಿ ಇದ್ದು, ವಸೂಲಾತಿಗಾಗಿ ದಾವೆ ನಂ.96/2004–2005, ದಿನಾಂಕ:03.07.2004ರಲ್ಲಿ ಆದೇಶವಾಗಿದ್ದು, ಅಮಲ್ಜಾರಿ ಸಂಖ್ಯೆ: 286/2004–05ರ ರೀತ್ಯಾ ವಸೂಲಾತಿಗಾಗಿ, ಕಾನೂನು ರೀತ್ಯಾ ತಿಳುವಳಿಕೆ ಪತ್ರವನ್ನು ನಮೂನೆ 2, 8, 9 ನ್ನು ಸಂಘದವರು ಜಾರಿ ಮಾಡಿದ್ದರೂ ಸಹ, ಸುಸ್ತಿ ಸಾಲಗಾರರು ಹಣವನ್ನು ಸಂಘಕ್ಕೆ ಮರುಪಾವತಿಸಿರುವುದಿಲ್ಲ. ಈ ಕಾರಣ ಸದರಿಯವರು ಹೊಂದಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡಲು, ಬಹಿರಂಗ ಹರಾಜು ನಡೆಸಲು ದಿನಾಂಕ ನಿಗದಿ ಪಡಿಸಿದ್ದು, ದಿನಾಂಕ:20.03.2006 ರಂದು ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಪಡಿಸಲಾಗಿದ್ದು, ಬಿಡ್‌ದಾರರು ಯಾರು ಭಾಗವಹಿಸದ ಕಾರಣ ಸದರಿ ಸ್ಥಿರಾಸ್ತಿಯನ್ನು ಸಹಕಾರಿಯ ಹೆಸರಿಗೆ ನಿಲ್ಲಿಸಿದ್ದು ಈ ಸ್ಥಿರಾಸ್ತಿಯನ್ನು ಸಹಕಾರಿಯ ಹೆಸರಿಗೆ ಸ್ಥಿರೀಕರಣಗೊಳಿಸಿ ಆದೇಶ ನೀಡಲು ಕೋರಿ ಉಲ್ಲೇಖ (1) ದಿನಾಂಕ:20.05.2006 ರಂದು ಸಹಕಾರಿಯ ವ್ಯವಸ್ಥಾಪಕರು ಹಾಗೂ ಮಾರಾಟಾಧಿಕಾರಿಗಳು ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಈ ಮಧ್ಯೆ ಸುಸ್ತಿ ಸಾಲಗಾರರಾದ ಶ್ರೀ ಚಿಕ್ಕಣ್ಣಸ್ವಾಮಿ ಬಿನ್ ಹೆಚ್.ಸಿ. ಚಿಕ್ಕಹನುಮಯ್ಯನವರು, ದಾವೆಯ ವಿರುದ್ಧ ಕರ್ನಾಟಕ ಗೌರವ ಮೇಲ್ಮನವಿ ನ್ಯಾಯಾಧೀಕರಣ ಬೆಂಗಳೂರು ಇಲ್ಲಿ ಅಪೀಲು ಸಂಖ್ಯೆ:456/2006ರ ರೀತ್ಯಾ ಅಪೀಲು ಹಾಕಿದ್ದು, ಸದರಿ ಅಪೀಲು ಅರ್ಜಿಯನ್ನು ಕರ್ನಾಟಕ ಗೌರವ ಮೇಲ್ಮನವಿ ನ್ಯಾಯಾಧೀಕರಣವು ದಿನಾಂಕ:11.02.2007 ರಂದು ವಜಾಗೊಳಿಸಿ ಆದೇಶಿಸಿರುತ್ತಾರೆ. ದಿನಾಂಕ:11.02.2007 ರ ನ್ಯಾಯಾಲಯದ ಆದೇಶದ ಪ್ರತಿಯನ್ನು ಲಗತ್ತಿಸಿ ಸಹಕಾರಿಯ

ವ್ಯವಸ್ಥಾಪಕರು ದಿನಾಂಕ:20.02.2009 ರಂದು ಪತ್ರ ಬರೆದು ದಿನಾಂಕ:20.03.2006 ರಂದು ಸದರಿ ಸ್ವತ್ತಿನ ಬಳಿ ಬಹಿರಂಗ ಹರಾಜು ನಡೆಸಿದ್ದು, ಬಿಡ್‌ದಾರರು ಯಾರು ಭಾಗವಹಿಸದ ಕಾರಣ, ಸದರಿ ಸ್ಥಿರಾಸ್ತಿಯನ್ನು ಸಹಕಾರಿಯ ಹೆಸರಿಗೆ ಸ್ಥಿರೀಕರಣಗೊಳಿಸಲು ಕೋರಿರುತ್ತಾರೆ.

ಸದರಿ ಸಹಕಾರಿಯು, ಈ ಮಧ್ಯೆ ಸೆಕ್ರೆಡ್ ಹಾರ್ಟ್ ಪತ್ತಿನ ಸಹಕಾರ ಸಂಘ ನಿ., ತುಮಕೂರು ಎಂಬುದಾಗಿದ್ದ ಸಂಘದ ಹೆಸರನ್ನು ಕರ್ನಾಟಕ ಸೌಹಾರ್ದ ಸಹಕಾರಿ ನಿಯಮ 2004ರ ರೀತ್ಯಾ ಸೆಕ್ರೆಡ್ ಹಾರ್ಟ್ ಕ್ರೆಡಿಟ್ ಕೋ–ಆಪರೇಟಿವ್ ಲಿ., ತುಮಕೂರು ಎಂಬುದಾಗಿ ಪರಿವರ್ತನೆಯಾಗಿರುತ್ತದೆ.

ಉಲ್ಲೇಖ (3) ದಿನಾಂಕ:26.02.2009 ರಂದು ಸಹಕಾರಿ ವ್ಯವಸ್ಥಾಪಕರು ಕೋರಿರುವಂತೆ, ಉಲ್ಲೇಖ (4) ದಿನಾಂಕ:05.03.2009 ರಂದು ಶ್ರೀ ಚಿಕ್ಕಣ್ಣಸ್ವಾಮಿ ಬಿನ್ ಹೆಚ್.ಸಿ. ಚಿಕ್ಕಹನುಮಯ್ಯ, ತುಮಕೂರುರವರಿಗೆ, ಕರ್ನಾಟಕ ಸೌಹಾರ್ದ ಸಹಕಾರಿ ನಿಯಮ 2004ರ ನಿಯಮ 18(3) ರ ಪ್ರಕಾರ ಈ ಕಛೇರಿಯಿಂದ ನೋಟಿಸ್‌ನ್ನು ನೀಡಿ, ದಿನಾಂಕ:20.03.2006ಕ್ಕೆ ಸಹಕಾರಿಗೆ ಪಾವತಿಸಬೇಕಾದ ಸುಸ್ತಿ ಸಾಲ ಬಾಕಿ ರೂ.4,78,295=00 ನ್ನು 30 ದಿವಸದೊಳಗಾಗಿ ಬಡ್ಡಿ ಸಮೇತ ಪಾವತಿಸಿ, ಪಾವತಿಸಿದ ಬಗ್ಗೆ ದಾಖಲಾತಿ ಮತ್ತು ಈ ಸಂಬಂಧ ನಿಮ್ಮ ಲಿಖಿತ ಆಕ್ಷೇಪಣೆಗಳಿದ್ದಲ್ಲಿ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಸದರಿ ಶ್ರೀ ಚಿಕ್ಕಣ್ಣಸ್ವಾಮಿ ಸುಸ್ತಿದಾರರು ನಿಗದಿಪಡಿಸಿದ ಅವಧಿಯಲ್ಲಿ ಮೇಲ್ಕಂಡ ಸಹಕಾರಿಗೆ ಪಾವತಿಸಬೇಕಾದ ಹಣವನ್ನು ಪಾವತಿಸಿದ ಬಗ್ಗೆಯಾಗಲಿ ಹಾಗೂ ತಮ್ಮ ಆಕ್ಷೇಪಣೆಗಳನ್ನಾಗಲಿ ಈ ಕಛೇರಿಗೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಕೆಳಕಂಡಂತೆ ಆದೇಶ ನೀಡಿರುತ್ತೇನೆ.

**ಆದೇಶ**

**ಸಂಖ್ಯೆ: ಸನಿ–32/ಸೌ.ಸ./ಸ್ಥಿರಾಸ್ತಿವರ್ಗಾವಣೆ/97/2008–2009, ದಿನಾಂಕ:11ನೇ ಮೇ, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಶ್ರೀ ಕೆ. ಗೋಪಾಲರೆಡ್ಡಿ, ಕೆ.ಸಿ.ಎಸ್. ಸಹಕಾರಿಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ ತುಮಕೂರು ಆದ ನಾನು, ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಓ/355/ಸಿ.ಎಲ್.ಎಂ./2005, ದಿನಾಂಕ:12.04.2006ರ ರೀತ್ಯಾ ಪ್ರತ್ಯಾಯೋಜಿಸಲ್ಪಟ್ಟ ಕರ್ನಾಟಕ ಸೌಹಾರ್ದ ಸಹಕಾರಿ ನಿಯಮ 2004ರ ನಿಯಮ 18(5)ರ ರೀತ್ಯಾ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಶ್ರೀ ಚಿಕ್ಕಣ್ಣಸ್ವಾಮಿ ಬಿನ್ ಹೆಚ್.ಸಿ. ಚಿಕ್ಕಹನುಮಯ್ಯ, ಹೊಸಬಡಾವಣೆ, ದೇವರಾಯಪಟ್ಟಣ, ತುಮಕೂರು ಇವರ ಸ್ಥಿರಾಸ್ತಿಯನ್ನು ಸೆಕ್ರೆಡ್ ಹಾರ್ಟ್ ಕ್ರೆಡಿಟ್ ಕೋ–ಆಪರೇಟಿವ್ ಲಿ., ತುಮಕೂರು, ಈ ಸಹಕಾರಿಯ ಹೆಸರಿಗೆ ವರ್ಗಾವಣೆ ಮಾಡಿ, ಸ್ಥಿರೀಕರಣ ಆದೇಶವನ್ನು ಷರತ್ತು ಮತ್ತು ನಿಯಮಗಳ ಅನ್ವಯ ಸ್ಥಿರೀಕರಣಗೊಳಿಸಿ ಆದೇಶ ನೀಡಿರುತ್ತೇನೆ.

ಈ ಆದೇಶಕ್ಕೆ ಸ್ವತ್ತುಗಳ ಹಸ್ತಾಂತರ ವರ್ಗಾವಣೆ ದೃಢೀಕರಣಪತ್ರ ನಮೂನೆ–12 ನ್ನು ಲಗತ್ತಿಸಿದೆ.

**ಷರತ್ತು ಮತ್ತು ನಿಯಮಗಳು:**

1) ಕರ್ನಾಟಕ ಸೌಹಾರ್ದ ಸಹಕಾರಿ ನಿಯಮ 18(12)ರಂತೆ ಸಹಕಾರಿಗೆ ವರ್ಗಾಯಿಸಿರುವ ಸ್ವತ್ತಿನ ಬಗ್ಗೆ ಪ್ರತ್ಯೇಕ ಲೆಕ್ಕವಿಟ್ಟು, ಆ ಸಂಬಂಧದಲ್ಲಿ ತಾನು ವಹಿಸಿದ ವೆಚ್ಚಗಳು ಬಾಹ್ಯ ಋಣಭಾರಗಳು, ಭೂಕಂದಾಯ ಮತ್ತು ಆಸ್ತಿಯ ಮೇಲಿನ ಇತರ ಬಾಕಿಗಳಿಗಾಗಿನ ಸಂದಾಯವು ಸೇರಿದಂತೆ ಎಲ್ಲಾ ವೆಚ್ಚಗಳನ್ನು ಮತ್ತು ಸದರಿ ಸ್ವತ್ತಿನಿಂದ ಪ್ರಾಪ್ತವಾದ, ಪ್ರಾಪ್ತವಾಗುವ ಎಲ್ಲಾ ಆದಾಯಗಳ ಲೆಕ್ಕವನ್ನು ವಿವರವಾಗಿ ಬರೆದಿಡುವುದು.
2) ಕರ್ನಾಟಕ ಸೌಹಾರ್ದ ಸಹಕಾರಿ ನಿಯಮ 18(13)ರಂತೆ ಸಹಕಾರಿಯು, ಸಾಧ್ಯವಾದಷ್ಟು ಬೇಗ ಸಹಕಾರಿಗೆ ಹಾಗೂ ಸುಸ್ತಿದಾರನಿಗೆ ಹೆಚ್ಚು ಅನುಕೂಲವಾಗುವಂತೆ ಸ್ವತ್ತನ್ನು ಮಾರಾಟ ಮಾಡಲು ಸಾಧ್ಯವಾದಷ್ಟು ಪ್ರಯತ್ನ ಮಾಡತಕ್ಕದ್ದು. ಮತ್ತು ಸ್ವತ್ತನ್ನು ಮೂಲತಃ ಹೊಂದಿದ್ದ ಸುಸ್ತಿದಾರನಿಗೆ ಯಾವಾಗಲು ಕೊಳ್ಳಲು ಮೊದಲನೆಯ ಅವಕಾಶ ಕೊಡತಕ್ಕದ್ದು. ಸ್ವತ್ತಿನ ಮಾರಾಟವು ರಿಜಿಸ್ಟ್ರಾರ್ ರವರ ಸ್ಥಿರೀಕರಿಸುವುದಕ್ಕೊಳಪಟ್ಟಿರತಕ್ಕದ್ದು. ಮಾರಾಟದಿಂದ ಬಂದ ಉತ್ಪನ್ನವನ್ನು, ಮಾರಾಟ ವೆಚ್ಚವನ್ನು ನಿಯಮ 9, 12ರಲ್ಲಿ ಉಲ್ಲೇಖಿಸಿದ ಇತರೆ ವೆಚ್ಚಗಳನ್ನು ಭರಿಸುವುದಕ್ಕೆ ಮತ್ತು ಜಾರಿಯಲ್ಲಿರುವ ಆದೇಶದಡಿ ಸುಸ್ತಿದಾರನಿಂದ ಬರಬೇಕಾದ ಬಾಕಿ ಮೊಬಲಗನ್ನು ಪಾವತಿಮಾಡುವುದಕ್ಕೆ ಉಪಯೋಗಿಸತಕ್ಕದ್ದು ಮತ್ತು ಮೊಬಲಗು ಏನಾದರೂ ಮಿಕ್ಕಿ ಉಳಿದಿದ್ದರೆ ಅದನ್ನು ಸುಸ್ತಿದಾರನಿಗೆ ಸಂದಾಯ ಮಾಡತಕ್ಕದ್ದು.
3) ಕರ್ನಾಟಕ ಸೌಹಾರ್ದ ಸಹಕಾರಿ ನಿಯಮ 18(13) ರಂತೆ ಸದರಿ ಸ್ವತ್ತು ಮಾರಾಟವಾಗುವವರೆವಿಗೂ ಸಹಕಾರಿಯು, ಸ್ವತ್ತನ್ನು ದೇಣಿಗೆ ಕೊಟ್ಟು ಅಥವಾ ಬೇರೆ ಯಾವುದಾದರೂ ರೀತಿಯಲ್ಲಿ ವಿನಿಯೋಗಿಸಿ ಸದರಿ ಸ್ವತ್ತಿನಿಂದ ಹೆಚ್ಚಿನ ವರಮಾನವನ್ನು ಪಡೆಯಲು ಹೆಚ್ಚು ಪ್ರಯತ್ನ ಮಾಡಬೇಕು.
4) ಕರ್ನಾಟಕ ಸೌಹಾರ್ದ ಸಹಕಾರಿ ನಿಯಮ 18(15)ರಂತೆ ಸಹಕಾರಿಯು, ಸದರಿ ಸ್ವತ್ತಿನ ನಿರ್ವಹಣೆಯಿಂದ ಬಂದ ಉತ್ಪನ್ನದಿಂದ ಆದೇಶದಡಿ ಬರಬೇಕಾದ ಎಲ್ಲಾ ಬಾಕಿಯನ್ನು ಪಡೆದಾಗ, ಸ್ವತ್ತು ಮಾರಾಟವಾಗದಿದ್ದರೆ, ಅದನ್ನು ಪುನಃ ಸುಸ್ತಿದಾರನ ವಶಕ್ಕೆ ಕೊಡತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:11.05.2009 ರಂದು ನೀಡಿದೆ.

ಸಹಕಾರಿಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

## ಸಹಕಾರ ಇಲಾಖೆ

## ಸಹಕಾರಿಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಕಾರ್ಯವಾಹಿಗಳು

**ಅಮಲ್ಜಾರಿ ಸಂಖ್ಯೆ: 286/2004–2005**

**ನಮೂನೆ–12**

**ಕರ್ನಾಟಕ ಸೌಹಾರ್ದ ಸಹಕಾರಿ ನಿಯಮ 18(5)**

**ಸ್ವತ್ತುಗಳ ಹಸ್ತಾಂತರ ವರ್ಗಾವಣೆ ದೃಢೀಕರಣ ಪತ್ರ**

ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ 1997ರ 43ನೇ ಪ್ರಕರಣದಡಿ, ಪ್ರಸ್ತಾಪಿಸಿರುವ ಅವಾರ್ಡ್‌ನ ಆದೇಶದನ್ವಯ ಹಾಗೂ ಅವಾರ್ಡ್ ವಿರುದ್ಧ ಅಮಲ್ಜಾರಿ ಆಗಿದ್ದು, ಅಮಲ್ಜಾರಿ ಸಂಖ್ಯೆ:286/2004–2005ರ ರೀತ್ಯಾ ಶ್ರೀ ಚಿಕ್ಕಣ್ಣಸ್ವಾಮಿ ಬಿನ್ ಹೆಚ್.ಸಿ. ಚಿಕ್ಕಹನುಮಯ್ಯ, ತುಮಕೂರು ಇವರ ಸ್ಥಿರಸ್ವತ್ತನ್ನು ದಿನಾಂಕ:20.03.2006 ರಂದು ಬಹಿರಂಗ ಹರಾಜು ಮಾಡಿದ್ದು, ಸದರಿ ಹರಾಜಿನಲ್ಲಿ ಸ್ಥಿರಾಸ್ತಿಯನ್ನು ಕೊಂಡುಕೊಳ್ಳುವವರು ಇಲ್ಲವೆಂದು ಮತ್ತು ಮಾರಾಟ ಮಾಡಲಿಕ್ಕಾಗಿರುವುದಿಲ್ಲವೆಂದು, ಸದರಿ ಸಹಕಾರಿಯ ಮಾರಾಟಾಧಿಕಾರಿಗಳು ತಿಳಿಸಿರುವುದರಿಂದ, ಅಂತಹ ಆಸ್ತಿಯ ಮೇಲೆ ಇರುವ ಸುಸ್ತಿದಾರನ ಹಕ್ಕು ಸ್ವಾಮ್ಯ ಮತ್ತು ಹಿತಾಸಕ್ತಿ, ಇವು ಈ ಆದೇಶದ ದಿನಾಂಕದಿಂದ ಸದರಿ ಸಹಕಾರಿಗೆ ನಿಹಿತವಾಗತಕ್ಕದ್ದೆಂದು ಮತ್ತು ಆದೇಶದಲ್ಲಿನ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಸದರಿ ಸ್ವತ್ತು, ಸೆಕ್ರೆಡ್ ಹಾರ್ಟ್ ಸೌಹಾರ್ದ ಕ್ರೆಡಿಟ್ ಕೋ–ಆಪರೇಟಿವ್ ಲಿ., ತುಮಕೂರು ರವರ ಹೆಸರಿಗೆ ಹಸ್ತಾಂತರಿಸಲಾಗಿದೆ ಎಂದು ಈ ಮೂಲಕ ಆದೇಶಿಸಲಾಗಿರುತ್ತದೆ.

**ಷೆಡ್ಯೂಲ್ ಸ್ವತ್ತಿನ ವಿವರಗಳು**

ತುಮಕೂರು ತಾಲ್ಲೂಕು, ಕಸಬಾ ಹೋಬಳಿ, ದೇವರಾಯಪಟ್ಟಣ ಗ್ರಾಮದ ಸರ್ವೆ ನಂ.77/2, ಮುನಿಸಿಪಲ್ ಖಾತೆ ನಂ.339, ನಿವೇಶನ ಸಂಖ್ಯೆ:05, ಇದರ ಅಳತೆ, ಪೂರ್ವ ಪಶ್ಚಿಮ–30 ಅಡಿಗಳು, ಉತ್ತರ ದಕ್ಷಿಣ–45 ಅಡಿಗಳಲ್ಲಿ ಇರತಕ್ಕ ಕಟ್ಟಡವು ಸೇರಿ, ಚೆಕ್ಕುಬಂದಿ:

ಪೂರ್ವಕ್ಕೆ– 8ನೇ ನಂಬರ್ ಸೈಟ್
ಪಶ್ಚಿಮಕ್ಕೆ– 4ನೇ ನಂಬರ್ ಸೈಟ್
ಉತ್ತರಕ್ಕೆ – 30 ಅಡಿ ರಸ್ತೆ
ದಕ್ಷಿಣಕ್ಕೆ– 6ನೇ ನಂಬರ್ ಸೈಟ್, ಈ ಮಧ್ಯೆ ಇರುವ ಸ್ವತ್ತು.

**ಅನುಸೂಚಿ**

ಸುಸ್ತಿ ಸಾಲಗಾರರು, ಮೇಲ್ಕಂಡ ಸಹಕಾರಿಗೆ ಸಂದಾಯ ಮಾಡಬೇಕಾದ ಬಾಕಿ ಮೊತ್ತದ ತೀರಿಕೆಗಾಗಿ ಸದರಿಯವರ ಸ್ವತ್ತನ್ನು, ಸೆಕ್ರೆಡ್ ಹಾರ್ಟ್ ಸೌಹಾರ್ದ ಕ್ರೆಡಿಟ್ ಕೋ–ಆಪರೇಟಿವ್ ಲಿ., ತುಮಕೂರು ಈ ಸಹಕಾರಿಯ ಹೆಸರಿಗೆ ಹಸ್ತಾಂತರಿಸಲಾಗಿರುತ್ತದೆ ಎಂದು ಈ ಮೂಲಕ ದೃಢೀಕರಿಸಿರುತ್ತೇನೆ.

ಈ ದೃಢೀಕರಣ ಪತ್ರವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:11.05.2009 ರಂದು ನೀಡಿದೆ.

ಸಹಕಾರಿಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

ಪಿ.ಆರ್.415

## ವಾಣಿಜ್ಯ ತೆರಿಗೆ ಇಲಾಖೆ

## ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರವರ ಕಛೇರಿ, (ಆಡಳಿತ) ಮೌ.ತೆ.ವಿ–3, ಬೆಂಗಳೂರು

**ಸಂಖ್ಯೆ: ಜಂಆ(ಆ)/ಡಿವಿಓ–3/08–09, ದಿನಾಂಕ:14ನೇ ಆಗಸ್ಟ್, 2009**

**ಕಳೆದುಕೊಂಡಿರುವ ಸಿ ನಮೂನೆ ಸಂಖ್ಯೆ:TN/E 998947**

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಬಯಸುವುದೇನೆಂದರೆ ಮೆ: ಆರ್.ಎಸ್. ಇಂಜಿನಿಯರ್ಸ್, ಶೆಡ್ ನಂ.6, ಆಂಥೋನಿ ಇಂಡಸ್ಟ್ರೀಯಲ್ ಎಸ್ಟೇಟ್, ಕನಕಪುರ ರಸ್ತೆ, ಬೆಂಗಳೂರು–78, ಟಿನ್ ಸಂಖ್ಯೆ: 29390092966 ಈ ನೋಂದಾಯಿತ ವರ್ತಕರಿಗೆ ಮೆ: ಅಶೋಕ ವೇಲ್ಯಾಂಡ್ ಎನ್ನೋರ್ ಚೆನ್ನೈ ಇವರು ನೀಡಿದ್ದ ಸಿ ನಮೂನೆ ಸಂಖ್ಯೆ: TN/E 998947 ಹಾಳೆಯನ್ನು ವರ್ತಕರು ಕಳೆದುಕೊಂಡಿರುತ್ತಾರೆ. ಕೇಂ.ಮಾ.ತೆ. ಕಾಯ್ದೆಯನ್ವಯ ಮೇಲೆ ತಿಳಿಸಿರುವ ಸಿ–ನಮೂನೆಯನ್ನು ರದ್ದುಗೊಳಿಸಲಾಗಿದೆ.

ಆದುದರಿಂದ, ಈ ಮೇಲ್ಕಂಡ ನಮೂನೆ–'ಸಿ' ಹಾಳೆಯನ್ನು ಯಾವುದೇ ವ್ಯಕ್ತಿ ಅಥವಾ ಸಂಸ್ಥೆ ಉಪಯೋಗಿಸಿದಲ್ಲಿ ಸರ್ಕಾರದ ರಾಜಸ್ವಕ್ಕೆ ಉಂಟಾಗುವ ನಷ್ಟಕ್ಕೆ ವೈಯುಕ್ತಿಕವಾಗಿ ಅವರೇ ಜವಾಬ್ದಾರರಾಗಿರುತ್ತಾರೆ.

ಬೆಂಗಳೂರು
ದಿನಾಂಕ:14.08.2009

ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು,
(ಆಡಳಿತ), ಮೌ.ತೆ.ವಿ–3, ಬೆಂಗಳೂರು.

ಪಿ.ಆರ್.805

## ತಹಶೀಲ್ದಾರ್ ಹೊಸನಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.

## ಅಧಿಸೂಚನೆ

ಭಾರತ ಸರ್ಕಾರದ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005(ಸೆಂಟ್ರಲ್ ಆಕ್ಟ 22 ಆಫ್ 2005)ಸೆಕ್ಷನ್ 5(1),5(1)ಮತ್ತು 19(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಂದಾಯ ಇಲಾಖೆಗೆ ಸೇರಿದ ತಹಶೀಲ್ದಾರ್ ಕಛೇರಿ ವ್ಯಾಪ್ತಿಯ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಅಂತಹ ಮಾಹಿತಿಯನ್ನು ಮೇಲಿನ ಕಾಯ್ದೆಯನ್ವಯ ಒದಗಿಸಲು ಮಾಹಿತಿ ಕೋರಿರುವ ಅರ್ಜಿಗಳು ಅಥವಾ ಮೇಲ್ಮನವಿಗಳನ್ನು ಸ್ವೀಕರಿಸಲು ಅನುಕ್ರಮವಾಗಿ "ಸಾರ್ವಜನಿಕ ಅಧಿಕಾರ" ಮತ್ತು "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರ"ಹಾಗೂ ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ಈ ಕೆಳಕಂಡಂತೆ ಸರ್ಕಾರದಿಂದ ನೇಮಿಸಲಾಗಿದೆ.

**(ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂ.ಇ 37 ವಿಮಕ 2005,ದಿನಾಂಕ:08.02.2006)**

| ಕ್ರ. ಸಂ. | ಕಛೇರಿ ಹೆಸರು | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005 ಕಲಂ5(1)ರ ಮಾಹಿತಿ ಪ್ರಕಾರ ಸಾರ್ವಜನಿಕ ಮಾಹಿತಿ ಅಧಿಕಾರ | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005 ಕಲಂ5(1)ರ ಮಾಹಿತಿ ಪ್ರಕಾರ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರ | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005 ಕಲಂ5(1)ರ ಮಾಹಿತಿ ಪ್ರಕಾರ ಮೇಲ್ಮನವಿ ಪ್ರಾಧಿಕಾರ |
|---|---|---|---|---|
| 1. | ತಾಲ್ಲೂಕು ಕಛೇರಿ ಹೊಸನಗರ | ತಹಶೀಲ್ದಾರ್ ಹೊಸನಗರ | ತಾಲ್ಲೂಕು ಕಛೇರಿ ಸಂಬಂಧಪಟ್ಟ ಶಿರಸ್ತೇದಾರ್ (ವಿಷಯವಾರು) | ಉಪವಿಭಾಗಾಧಿಕಾರಿಗಳು, ಸಾಗರ ಉಪವಿಭಾಗ, ಸಾಗರ |
| 2. | ನಾಡ ಕಛೇರಿ ಕೆರೆಹಳ್ಳಿ | ರಾಜಸ್ವ ನಿರೀಕ್ಷಕರು ಕೆರೆಹಳ್ಳಿ ಹೋಬಳಿ | ಗ್ರಾಮ ಲೆಕ್ಕಾಧಿಕಾರಿಗಳು ಸಂಬಂಧಪಟ್ಟ ವೃತ್ತ | ಉಪ ತಹಶೀಲ್ದಾರ್ ಕೆರೆಹಳ್ಳಿ |
| 3. | ನಾಡ ಕಛೇರಿ ನಗರ | ರಾಜಸ್ವ ನಿರೀಕ್ಷಕರು ನಗರ ಹೋಬಳಿ | ಗ್ರಾಮ ಲೆಕ್ಕಾಧಿಕಾರಿಗಳು ಸಂಬಂಧಪಟ್ಟ ವೃತ್ತ | ಉಪ ತಹಶೀಲ್ದಾರ್ ನಗರ |

**ಬಿ(1)(ಅ)ಹೊಸನಗರ ತಾಲ್ಲೂಕಿನ ಸಾಮಾನ್ಯ ಮಾಹಿತಿಗಳು**

| ಕ್ರ. ಸಂ. | ವಿವರ | |
|---|---|---|
| **1** | **ಭೌಗೋಳಿಕ ವಿಸ್ತೀರ್ಣ** | 351571 ಹೆಕ್ಟೆರ್–11ಗುಂಟೆ |
| 2 | ಒಟ್ಟು ಜನಸಂಖ್ಯೆ | 1,15000 |
| **1** | ಗ್ರಾಮೀಣ ಜನಸಂಖ್ಯೆ | 1,09,957 |
| 2 | ನಗರ ಜನಸಂಖ್ಯೆ | 5,043 |
| 3 | ನಗರ ಪ್ರದೇಶ | 1 |
| 4 | ಗಂಡಸರು | 57,392 |
| 5 | ಹೆಂಗಸರು | 57,608 |
| 6 | ಪರಿಶಿಷ್ಟ–ಜಾತಿ | 10,834 |
| 7 | ಪರಿಶಿಷ್ಟ–ಪಂಗಡ | 1929 |
| 8 | ಲಿಂಗಾನುಪಾತ | 1004 |
| 9 | ಜನಸಾಂದ್ರತೆ | ಪ್ರತಿ ಚ.ಕಿ.ಮೀ.ಗೆ 81 |
| **3)** | **ಶೈಕ್ಷಣಿಕ ಸಂಸ್ಥೆಗಳು** | |
| 1 | ಪದವಿ ಪೂರ್ವ ಕಾಲೇಜ್ | 6 |
| 2 | ಪದವಿ ಕಾಲೇಜ್ | 1 |
| 3 | ಪ್ರಾಥಮಿಕ ಶಾಲೆಗಳು | 233 |
| 4 | ಪ್ರೌಢ ಶಾಲೆಗಳು | 23 |
| 5 | ಸಾಕ್ಷರತೆ ಪ್ರಮಾಣ | 78% |
| **4)** | **ಮಳೆ ಪ್ರಮಾಣ** | |
| 1 | ವಾಡಿಕೆ ಮಳೆ | 2,962.3 ಮಿ.ಮೀ |

| ಕ್ರ. ಸಂ. | ವಿವರ | |
|---|---|---|
| 2 | ವಾಸ್ತವಿಕ ಮಳೆ | – |
| 3 | ಮಳೆ ಮಾಪನಗಳು | 19 |
| **5)** | **ಬ್ಯಾಂಕುಗಳು** | |
| 1 | ವಾಣಿಜ್ಯ ಬ್ಯಾಂಕು | 11 |
| 2 | ಗ್ರಾಮೀಣ ಬ್ಯಾಂಕು | 4 |
| 3 | ಸಹಕಾರಿ ಬ್ಯಾಂಕು(ಪಿ,ಎಲ್,ಡಿ.ಬಿ) | 1 |
| 4 | ಕ್ರೇಡಿಟ್ ಸಹಕಾರಿ ಸಂಘ | 2 |
| **6)** | **ರಸ್ತೆಗಳು** | |
| 1 | ರಾಷ್ಟ್ರೀಯ ಹೆದ್ದಾರಿ | – |
| 2 | ರಾಜ್ಯ ಹೆದ್ದಾರಿ | 02 |
| 3 | ಜಿಲ್ಲಾ ಮುಖ್ಯ ರಸ್ತೆ | 01 |
| **7** | ನಾಡಕಛೇರಿಗಳು | 2 |
| **8** | ಹೋಬಳಿಗಳು | 4 |
| **9** | ಕಂದಾಯ ಗ್ರಾಮಗಳು | 209 |
| **10** | ಗ್ರಾಮ ಪಂಚಾಯಿತಿಗಳು | 39 |

**4.ಬಿ(1) ಇ.ಕಾರ್ಯವಿಧಾನ:**

1) ತಹಶೀಲ್ದಾರ್ ಹೊಸನಗರ ತಾಲ್ಲೂಕಿನ ಕಂದಾಯಾಡಳಿತ ವ್ಯವಸ್ಥೆಯ ಮುಖ್ಯಸ್ಥರಾಗಿದ್ದು ಆಡಳಿತ ಹಾಗೂ ಕಾನೂನು ಸುವ್ಯವಸ್ಥೆಯ ಸಂಪೂರ್ಣ ಅಧಿಕಾರ ಹೊಂದಿರುವವರಾಗಿದ್ದಾರೆ. ಕರ್ನಾಟಕ ಭೂ ಕಂದಾಯ ಅಧಿನಿಯಮ 1964 ಕಲಂ 11 ರಂತೆ ತಾಲ್ಲೂಕಿಗೆ ಒಬ್ಬರಂತೆ ತಹಶೀಲ್ದಾರ್‌ರನ್ನಾಗಿ ನೇಮಕ ಮಾಡಲಾಗಿದೆ.ಕರ್ನಾಟಕ ಭೂ ಕಂದಾಯ ಕಾಯ್ದೆ ಮತ್ತು ಕೇಂದ್ರ ಹಾಗೂ ರಾಜ್ಯ ಅಧಿನಿಯಮಗಳಲ್ಲಿ ನಿಯಮಿಸಿದ ಎಲ್ಲಾ ಅಧಿಕಾರ ಮತ್ತು ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದಾರೆ. ತಹಶೀಲ್ದಾರ್ ತಾಲ್ಲೂಕಿನ ದಂಡಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

**4.(ಬಿ)11.**

**11. ಕಂದಾಯ ಇಲಾಖೆಯು ಈ ಕೆಳಕಂಡ ಸಾಮಾನ್ಯ ಕಾರ್ಯಗಳನ್ನು ಪ್ರಮುಖವಾಗಿ ನಿರ್ವಹಿಸುತ್ತದೆ.**

ಅ.1) ಕಾರ್ಯಕಾರಿ ದಂಡಾಧಿಕಾರಿಯ ಕಾರ್ಯನಿರ್ವಹಣೆ.

2) ಸಾರ್ವಜನಿಕ ದೂರು ನಿರ್ವಹಣೆ.

3) ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಸಾರ್ವಜನಿಕ ವಿತರಣಾ ವ್ಯವಸ್ಥೆಯ ನಿರ್ವಹಣೆ.

4) ಎಲ್ಲಾ ರೀತಿಯ ಚುನಾವಣೆಗಳನ್ನು ನಡೆಸುವುದು.

5) ಎಲ್ಲಾ ರೀತಿಯ ಗಣತಿ ಕಾರ್ಯಗಳನ್ನು ನಡೆಸುವುದು (ಜನಗಣತಿ,ಜಾನುವಾರು ಗಣತಿ,ಕೃಷಿ ಗಣತಿ, ಆರ್ಥಿಕ ಗಣತಿ).

6) ಜಿಲ್ಲಾಧಿಕಾರಿಗಳ ಪರವಾಗಿ ಶಿಷ್ಟಾಚಾರ ಕಾರ್ಯನಿರ್ವಹಣೆ.

7) ಪ್ರಕೃತಿ ವಿಕೋಪ,ನೈಸರ್ಗಿಕ ವಿಕೋಪ ಮತ್ತು ಮಾನವ ನಿರ್ಮಿತ ವಿಕೋಪಗಳಿಂದ ಬಾಧಿತರಾದವರಿಗೆ ಪರಿಹಾರ, ಪುನರ್ ವಸತಿ ಮತ್ತು ಪುನರ್ ನಿರ್ಮಾಣ ಕಾರ್ಯನಿರ್ವಹಣೆ.

8) ವೃದ್ದಾಪ್ಯ ವೇತನ, ಅಂಗವಿಕಲ ವೇತನ,ವಿಧವಾ ವೇತನ,ಸಂಧ್ಯಾ ಸುರಕ್ಷಾ ವಶತನ ಮೊದಲಾದ ಸಾಮಾಜಿಕ ಸುರಕ್ಷತೆಯ ನಿರ್ವಹಣೆ.

9) ಆಯುಧ ಕಾಯಿದೆಯಡಿ ಪ್ರಕರಣ ವಿಲೇವಾರಿ.

10) ಆದಾಯ, ಜಾತಿ, ವಾಸ್ತವ್ಯದ ಬಗ್ಗೆ ದೃಢೀಕರಣ ನೀಡುವುದು.

11) ನ್ಯಾಯಾಲಯದಲ್ಲಿ ಸರ್ಕಾರಿ ವ್ಯಾಜ್ಯ ನಿರ್ವಹಣೆ.

12) ಸರ್ಕಾರದಿಂದ ಕಾಲಕಾಲಕ್ಕೆ ಜಾರಿಗೆ ಬರುವ ವಿವಿಧ ಯೋಜನೆಗಳ ಮತ್ತು ಕಾರ್ಯಗಳ ನಿರ್ವಹಣೆ.

**ಆ. ಕಂದಾಯ ಆಡಳಿತ**

1) ರಾಜ್ಯದಲ್ಲಿನ ಭೂ ದಾಖಲೆಗಳ ನಿರ್ವಹಣೆ, ಎಲ್ಲಾ ಜಮೀನುಗಳ ಭೂ ಮಾಪನ.

2) ಭೂಕಂದಾಯ ನೀರು ತೆರಿಗೆ, ಸರ್ಕಾರಿ ಬಾಕಿ ವಸೂಲಾತಿ.

3) ಗೋಮಾಳ, ಕೆರೆ, ಅಂಗಳ, ಉಪವನಗಳು ಇತ್ಯಾದಿ ಸಾಮುದಾಯಿಕ ಜಮೀನುಗಳನ್ನು ನಿರ್ದಿಷ್ಟ ಉದ್ದೇಶಕ್ಕಾಗಿ ಕಾಯ್ದಿರಿಸಿದ ಜಮೀನುಗಳ ನಿರ್ವಹಣೆ ಮತ್ತು ಪರಿಸರ ಸಂರಕ್ಷಣೆ.
4) ಅಕ್ರಮ–ಸಕ್ರಮ ಸಮಿತಿಗೆ ಪೂರಕ ಮಾಹಿತಿ ಹಾಗೂ ದಾಖಲಾತಿ ನಿರ್ವಹಣೆ.
5) ಭೂ ಸುಧಾರಣೆ ಮತ್ತು ಗಣಿಗಾರಿಕೆ ನಿಬಂಧನೆಗಳ ನಿರ್ವಹಣೆ.
6) ಭೂ ಪರಿವರ್ತನೆ.
7) ಕರ್ನಾಟಕ ಭೂ ಕಂದಾಯ ಕಾಯ್ದೆಯಡಿಯಲ್ಲಿ ಬರುವ ಎಲ್ಲ ವ್ಯವಹಾರಗಳ ನಿರ್ವಹಣೆ.

**ಇ. ಕಾನೂನು ಆಡಳಿತ**

**ತಹಶೀಲ್ದಾರ್ ಹೊಂದಿರುವ ಅಧಿಕಾರದ ಮುಖ್ಯ ಕಾಯ್ದೆಗಳ ಮತ್ತು ಕಾನೂನುಗಳ ವಿವರ**

1) ಕರ್ನಾಟಕ ಭೂ ಕಂದಾಯ ಕಾಯ್ದೆಯ ಅಧಿನಿಯಮ 1961 ಮತ್ತು ನಿಯಮಾವಳಿ 1974
2) ಕರ್ನಾಟಕ ಹಲವು ಇನಾಂ ರದ್ದತಿ ಅಧಿನಿಯಮ 1977
3) ಕರ್ನಾಟಕ ಗ್ರಾಮ ನೌಕರಿಗಳ ರದ್ದತಿ ಅಧಿನಿಯಮ–1961
4) ಕರ್ನಾಟಕ ಪುರ ಸಭೆಗಳ ಅಧಿನಿಯಮ–1964
5) ಕರ್ನಾಟಕ ಕೃಷಿಸಾಲ ಕಾರ್ಯಾಚರಣೆ ಮತ್ತು ಇತರ ಉಪಬಂಧಗಳ ಅಧಿನಿಯಮ–1974 ಮತ್ತು ನಿಯಮಾವಳಿ–1975
6) ಕರ್ನಾಟಕ ವೃದ್ಧಾಪ್ಯ ವೇತನ ನಿಯಮಾವಳಿ
7) ನಿರ್ಗತಿಕ ವಿಧವಾ ವೇತನ ನಿಯಮಾವಳಿ
8) ದೈಹಿಕ ಅಂಗವಿಕಲರಿಗೆ ನಿರ್ವಹಣಾ ಭತ್ಯೆ ಮಂಜೂರಿ ನಿಯಮಾವಳಿ
9) ಕರ್ನಾಟಕ ಋಣ ವಿಮೋಚನಾ ಅಧಿನಿಯಮ.
10) ಮತದಾರರ ನೋಂದಣಿ ನಿಯಮಾವಳಿ
11) ಕರ್ನಾಟಕ ಕೃಷಿಉತ್ಪನ್ನ ಮಾರುಕಟ್ಟೆ ನಿಯಂತ್ರಣ ಅಧಿನಿಯಮ–1966
12) ಕರ್ನಾಟಕ ನೀರಾವರಿ ಅಧಿನಿಯಮ–1965
13) ಕರ್ನಾಟಕ ನೀರಾವರಿ (ನೀರಿನ ಕರ ಆಚರಣೆ) ನಿಯಮಾವಳಿ–1965
14) ಕರ್ನಾಟಕ ಅರಣ್ಯ ನಿಯಮಾವಳಿ–1969
15) ಕರ್ನಾಟಕ ಜಾನುವಾರು ಅತಿಕ್ರಮ ಪ್ರವೇಶ ಅಧಿನಿಯಮ–1966
16) ಕರ್ನಾಟಕ ಸಾರ್ವಜನಿಕ ಆವರಣಗಳ ಅಧಿನಿಯಮ–1974 ಮತ್ತು ಅದರಡಿಯ ನಿರ್ವಹಣೆ.

"ದಂಡಾಧಿಕಾರಿಯಾಗಿ ತಹಶೀಲ್ದಾರರು ಈ ಕೆಳಗಿನ ಕಾಯಿದೆಗಳಡಿಯಲ್ಲಿ ಅಧಿಕಾರ ಹಾಗೂ ಕರ್ತವ್ಯಗಳನ್ನು ಹೊಂದಿರುತ್ತಾರೆ."

1) ದಂಡ ಪ್ರಕ್ರಿಯೆ ಸಂಹಿತೆ–1974.
2) ಭಾರತ ಸಾಕ್ಷ್ಯ ಅಧಿನಿಯಮ–1963
3) ಕರ್ನಾಟಕ ಪೋಲಿಸ್ ಅಧಿನಿಯಮ–1976
4) ಜೀತದಾಳು ಪದ್ದತಿ(ನಿರ್ಮೂಲನೆ) ಅಧಿನಿಯಮ–1976
5) ಪ್ರಮಾಣ ವಚನ ಅಧಿನಿಯಮ–1999
6) ಭಾರತೀಯ ಮುದ್ರಾಂಕ ಅಧಿನಿಯಮ–1899
7) ಪ್ರಾಣಿಗಳ ಹಿಂಸೆ ಅಧಿನಿಯಮ–1960
8) ಕರ್ನಾಟಕ ಭಿಕ್ಷಾಟನಾ ಅಧಿನಿಯಮ–1975
9) ಸಾರ್ವಜನಿಕ ಆರೋಗ್ಯ ಅಧಿನಿಯಮ–1944
10) ಕರ್ನಾಟಕ ಮಾರಾಟಕರ ಅಧಿನಿಯಮ–1957
11) ಪರಿಶಿಷ್ಟ–ಜಾತಿ, ಪರಿಶಿಷ್ಟ ವರ್ಗಗಳ (ದೌರ್ಜನ್ಯ ನಿಷಿದ್ಧ) ಅಧಿನಿಯಮ–1989
12) ಕರ್ನಾಟಕ ಆಹಾರ ಮತ್ತು ನಾಗರೀಕ ಪೂರೈಕೆ ಅಧಿನಿಯಮ
13) ಮುಜರಾಯಿ ಇಲಾಖೆಗೆ ಸೇರಿದ ದೇವಸ್ಥಾನಗಳ ನಿರ್ವಹಣೆ.

**4.ಬಿ(1)ರಲ್ಲಿ.11.**

**ತಾಲ್ಲೂಕು ಕಛೇರಿಯ ಅಧಿಕಾರಿಗಳ ಮತ್ತು ನೌಕರರ ಅಧಿಕಾರಿಗಳ ಮತ್ತು ಕರ್ತವ್ಯದ ವಿವರಗಳು.**

| ಕ್ರ.ಸಂ. | ವಿವರ |
|---|---|
| 1. | ತಹಶೀಲ್ದಾರ್ |
| 2. | ತಾಲ್ಲೂಕು ಶಿರಸ್ತೆದಾರ್ |
| | 1) ಪ್ರಥಮ ದರ್ಜೆ ಸಹಾಯಕರು |
| | 2) ದ್ವಿತೀಯದರ್ಜೆ ಸಹಾಯಕರು |
| | 3) ಬೆರಳಚ್ಚುಗಾರರು |
| | 4) ವಾಹನ ಚಾಲಕರು |
| | 5) ದಫೇದಾರ್ |
| | 6) ಜವಾನರು |
| 3. | ಹಕ್ಕು ದಾಖಲೆ ಶಿರಸ್ತೆದಾರ್ |
| | 1) ಪ್ರಥಮ ದರ್ಜೆ ಸಹಾಯಕರು |
| | 2) ರಾಜಸ್ವ ನಿರೀಕ್ಷಕರು |
| | 3) ದ್ವಿತೀಯದರ್ಜೆ ಸಹಾಯಕರು |
| | 4) ಗ್ರಾಮಲೆಕ್ಕಿಗರು |
| | 5) ದಫ್ತರ್ ಬಂದ್ |
| | 6) ಜವಾನರು |
| 2) | ಚುನಾವಣೆ ಶಿರಸ್ತೇದಾರ್ |
| | 1) ಪ್ರಥಮ ದರ್ಜೆ ಸಹಾಯಕರು |
| | 2) ದ್ವಿತೀಯದರ್ಜೆ ಸಹಾಯಕರು |
| 3) | 1) ಆಹಾರ ನಿರೀಕ್ಷಕರು |
| | 2) ದ್ವಿತೀಯದರ್ಜೆ ಸಹಾಯಕರು |
| 4) | ಉಪ ತಹಶೀಲ್ದಾರ್, ನಾಡಕಛೇರಿ |
| | 1) ದ್ವಿತೀಯದರ್ಜೆ ಸಹಾಯಕರು |
| | 2) ರಾಜಸ್ವ ನಿರೀಕ್ಷಕರು |
| | 3) ಬೆರಳಚ್ಚುಗಾರರು |
| | 4) ಜವಾನರು |
| 5) | ಪರ್ಯಾವೇಕ್ಷಕರು |
| | 1) ಪ್ರಥಮ ದರ್ಜೆ ಭೂಮಾಪಕರು |
| | 2) ಪ್ರಥಮ ದರ್ಜೆ ಸಹಾಯಕರು |
| | 3) ದ್ವಿತೀಯ ದರ್ಜೆ ಸಹಾಯಕರು |
| | 4) ಜವಾನರು |
| | 5) ಧಫ್ತರ್ ಬಂದ್ |

**111.4(1)(111)**

ತಾಲ್ಲೂಕು ಕಛೇರಿಯ ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆಯ ಮಾರ್ಗಗಳು ಸೇರಿದಂತೆ ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸಬೇಕಾದ.

**ಕಾರ್ಯವಿಧಾನ:**

ತಾಲ್ಲೂಕು ಕಛೇರಿಯಲ್ಲಿ ಅಧಿಕಾರಿಗಳು ಮತ್ತು ಸಿಬ್ಬಂದಿಯ ಅಧಿಕಾರ ಮತ್ತು ಕರ್ತವ್ಯಗಳ ಬಗ್ಗೆ ಕಾಲಕಾಲಕ್ಕೆ ನೀಡಲಾಗುವ ಕಾರ್ಯನಿರ್ವಹಣೆ, ಅಧಿಕೃತ ಜ್ಞಾಪನಗಳಲ್ಲಿ ಕಾರ್ಯನಿರ್ವಹಣಾ ಆದೇಶ ಜಾರಿಗೊಳಿಸಿದೆ ಅಂತೆಯೇ ಸಿಬ್ಬಂದಿ ವರ್ಗದವರು ಕಾರ್ಯನಿರ್ವಹಿಸುತ್ತಿದ್ದಾರೆ.

ಮೇಲೆ ತಿಳಿಸಿರುವ ಎಲ್ಲಾ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗ (ಗ್ರೂಫ್ ಸಿ ಮತ್ತು ಡಿ) ತಹಶೀಲ್ದಾರರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಈ ಕಛೇರಿಯಲ್ಲಿ ನಿರ್ವಹಿಸುವ ಎಲ್ಲಾ ಸಂಬಂಧಿಸಿದ ಶಾಖೆಗಳ ವಿಷಯಗಳಲ್ಲಿ ಅಂತಿಮ ಕೈಗೊಳ್ಳುವ ಅಧಿಕಾರಿ ತಹಶೀಲ್ದಾರ್‌ರಾಗಿರುತ್ತಾರೆ.

**1) ಕಾಗದ ಪತ್ರಗಳ ಸ್ವೀಕೃತಿ ವಿಲೇವಾರಿ:**

ಸಾರ್ವಜನಿಕರಿಂದ ಅಧೀನ ಕಛೇರಿಗಳಿಂದ ಮತ್ತು ಸರ್ಕಾರ ಹಾಗೂ ಮೇಲಾಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು, ಕಡತಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಾರ್ವಜನಿಕರ ಮನವಿ ಬಗ್ಗೆ ಸ್ಥಳದಲ್ಲಿ ಸ್ವೀಕೃತಿ ಪತ್ರವನ್ನು ನೀಡಿದ ನಂತರ ಕಛೇರಿಯ ತಾಲ್ಲೂಕು ಶಿರಸ್ತೇದಾರ್ ಮುಖಾಂತರ ತಹಶೀಲ್ದಾರ್ ಗಮನಕ್ಕೆ ತಂದು ಸ್ವೀಕೃತಿ ಶಾಖೆಯಲ್ಲಿ ದಾಖಲಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಪ್ರತಿ ಕಡತ ಕಾಗದ ಪತ್ರಗಳನ್ನು ಶಾಖಾವಾರು ಗುರುತಿಸುವಂತೆ ಹಾಕಿದ ನಂತರ ಅಗತ್ಯ ಕ್ರಮ ಕೈಗೊಳ್ಳಲು ನೀಡಲಾಗುತ್ತದೆ.

**4.(ಬಿ)(1)4.**

| ಕ್ರ.ಸಂ. | ಕಛೇರಿ ಪ್ರಕಾರ್ಯಗಳ ನಿರ್ವಹಣೆಗೆ ರೂಪಿಸಿದ ಸೂತ್ರಗಳು |
|---|---|
| 1. | ತಹಶೀಲ್ದಾರ್ ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ದಾಖಲಿಸಿ ವಿಷಯ ನಿರ್ವಾಹಕರಿಗೆ ನೀಡುವ ವ್ಯವಸ್ಥೆ ಕಲ್ಪಿಸಲಾಗಿದೆ |
| 2. | ಸಾರ್ವಜನಿಕರಿಂದ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳಿಗೆ ಸ್ವೀಕೃತಿನೀಡುವುದಲ್ಲದೆ ಕಾರ್ಯಗತ ಅವಧಿ ನಿಗದಿಪಡಿಸಿ ತಿಳಿಸಲಾಗುತ್ತದೆ. |
| 3. | ಸಾರ್ವಜನಿಕರ ಕುಂದು ಕೊರತೆಗಳ ನಿವಾರಣೆ ಬಗ್ಗೆ ನವೀಕರಿಸಲಾಗುವ ಎಲ್ಲಾ ಮನವಿಗಳನ್ನು ಪ್ರತ್ಯೇಕ ರಿಜಿಸ್ಟರ್ ನಲ್ಲಿ ನಮೂದಿಸಿ ಕ್ಷಿಪ್ರ ಕಾಲದಲ್ಲಿ ಉತ್ತರ ನೀಡುವುದು. |

ಅಧೀನ ಕಛೇರಿಗಳಿಂದ ವರದಿ ಪಡೆಯಲು ಕಾಲಾವಧಿ ನಿಗದಿಪಡಿಸುವುದು ಇಲಾಖೆಯ ಪ್ರಕಾರ್ಯಗಳ ಪ್ರಗತಿ ಪರಿಶೀಲನೆ ಬಗ್ಗೆ ಪ್ರತಿ ಮಾಹೆಯಲ್ಲೂ ಕಂದಾಯ ನಿರೀಕ್ಷಕರ ಮತ್ತು ಗ್ರಾಮಲೆಕ್ಕಾಧಿಕಾರಿಗಳ ಸಭೆ ಕರೆಯಲಾಗುವುದು.

ಕಛೇರಿ ಕೈಪಿಡಿ ನಿಯಮಾವಳಿ ರಿತ್ಯಾ ಕಾಗದ ಪತ್ರಗಳನ್ನು ವಿಷಯ ನಿರ್ವಾಹಕರು ಸ್ವೀಕರಿಸಿ ಗರಿಷ್ಟ 5 ದಿನಗಳೊಳಗಾಗಿ ವಿಷಯ ನಿರ್ವಾಹಕರು ಸ್ವೀಕರಿಸುವ ಎಲ್ಲಾ ಕಾಗದ ಪತ್ರಗಳನ್ನು ವಿಷಯ ನಿರ್ವಾಹಕರ ದಿನಚರಿಯಲ್ಲಿ ನಮೂದಿಸಿಕೊಂಡು ತದನಂತರ ವಿಷಯ ವಹಿಯಲ್ಲಿ ಅನುಕ್ರಮವಾಗಿ ದಾಖಲಿಸಿಕೊಂಡು ಕಡತಗಳಲ್ಲಿ ಟಿಪ್ಪಣಿ ಹಾಕಿ ಮಂಡಿಸುತ್ತಾರೆ. ವಿಷಯ ನಿರ್ವಾಹಕರೆಲ್ಲರೂ ಕಛೇರಿ ಕಾರ್ಯವಿಧಾನ ರಿತ್ಯಾ ಐದುಕಟ್ಟು ವಿಧಾನ ಅಳವಡಿಸಿ ಕಾರ್ಯನಿರ್ವಹಿಸುತ್ತಾರೆ.

ವಿಷಯ ನಿರ್ವಾಹಕರಿಂದ ಬಂದಂತಹ ಎಲ್ಲ ಕಡತಗಳ ಪರಿಶೀಲನೆ ಮಾಡಿ ಶಾಖಾ ಮುಖ್ಯಸ್ಥರು ವಿಳಂಬವಾಗದ ರೀತಿ ಕಡತದಲ್ಲಿ ವಿಷಯವಾರು ತೀರ್ಮಾನ ಕೈಗೊಳ್ಳುವ ನಿಟ್ಟಿನಲ್ಲಿ ಸೂಕ್ತ ಅಭಿಪ್ರಾಯದೊಂದಿಗೆ ಸಲ್ಲಿಸುತ್ತಾರೆ.

ಕಡತಗಳಲ್ಲಿ ತೀರ್ಮಾನ ಕೈಗೊಳ್ಳುವ ಬಗ್ಗೆ ಅನುಸರಿಸುವ ಬಗ್ಗೆ ಕಾರ್ಯವಿಧಾನ ಕಛೇರಿ ಕೈಪಿಡಿಯ ನಿಯಮಾವಳಿ ರಿತ್ಯ ಕ್ರಮವಹಿಸಲಾಗುತ್ತದೆ.

**4.ಬಿ(1)5**

ತಹಶೀಲ್ದಾರರ ನಿಯಂತ್ರಣದಲ್ಲಿರುವ ದಾಸ್ತಾವೇಜುಗಳ ಪ್ರವರ್ಗಗಳು ತಹಶೀರೂಪಿಸಲಾದ ಕಾಯಿದೆ ನಿಯಮಗಳಡಿ ನಿರ್ವಹಿಸುವ ಎಲ್ಲಾ ಕಡತಗಳಲ್ಲಿ ಅಂತಿಮ ನೀಡಿ ಮುಕ್ತಾಯವಾದ ನಂತರ ಪ್ರತಿ ಕಡತಗಳ ಪ್ರಾಮುಖ್ಯತೆಯನ್ನು ಅನುಸರಿಸಿ ಪ್ರವರ್ಗ 'A' 'B' 'C' ಎಂದು ವರ್ಗಿಕರಿಸಿ ನಿರ್ವಹಿಸಲಾಗುತ್ತಿದೆ.

ಪ್ರತಿ ವರ್ಗೀಕರಣ ಅವದಿ ಈ ಕೆಳಕಂಡಂತಿರುತ್ತದೆ.

"ಎ"ಡಿಸ್–ಶಾಶ್ವತ

"ಬಿ"ಡಿಸ್–30 ವರ್ಷಗಳು

"ಸಿ"ಡಿಸ್–10 ವರ್ಷಗಳು

**4.ಬಿ(1)6**

ಕಛೇರಿಯ ಕೆಲಸಕ್ಕಾಗಿ ಉಪಯೋಗಿಸಬೇಕಾದ ವಹಿಗಳು ದಾಖಲೆಗಳು:

ಕಛೇರಿಯ ಕೆಲಸದ ಬಗ್ಗೆ ಈ ಕೆಳಗಿನ ವಹಿಗಳನ್ನು ಇಟ್ಟು ಕೆಲಸ ನಿರ್ವಹಿಸಲಾಗುತ್ತದೆ.

| ಕ್ರ.ಸಂ. | ವಿವರ |
|---|---|
| 1. | ಟಪಾಲು ವಹಿ |
| 2. | ಅರೆ ಸರ್ಕಾರಿ ಪತ್ರಗಳ ವಹಿ |
| 3. | ಚುಕ್ಕೆ ಗುರುತಿನ ಪ್ರಶ್ನೆ ವಹಿ |

| ಕ್ರ.ಸಂ. | ವಿವರ |
|---|---|
| 4. | ಹಾಜರಾತಿ ವಹಿ |
| 5. | ಚಲನ್ ವಹಿ |
| 6. | ಅಕ್ರಮ–ಸಕ್ರಮ ಮಂಜೂರಾತಿ ವಹಿ |
| 7. | ಮನೆ ನಿವೇಶನ ಮಂಜೂರಾತಿ ವಹಿ |
| 8. | ಬಂದೂಕು ಪರವಾನಿಗೆ ವಹಿ |
| 9. | ವೃದ್ಧಾಪ್ಯ, ವಿಧವಾ, ಅಂಗವಿಕಲ ವೇತನ ವಹಿ |
| 10. | ಸಂಧ್ಯಾ ಸುರಕ್ಷಾ ವಹಿ |
| 11. | ವಿಷಯ ನಿರ್ವಾಹಕರುಗಳಲ್ಲಿರುವ ವಹಿಗಳು |
| | ಎ) ದಿನ ವಹಿ |
| | ಬಿ) ದಿನಚರಿ ವಹಿ |
| | ಸಿ) ವಾರ ವಹಿ |
| | ಡಿ) ತಿಂಗಳ ಪ್ರಗತಿ ವಹಿ |
| 12. | ವಿವಿದ ಲೆಕ್ಕ ಶೀರ್ಷಿಕೆಗಳ ಸಿಬ್ಬಂದಿ ವೇತನ ವಹಿ |
| 13. | ಪ್ರಕೃತಿ ವಿಕೋಪ ಪರಿಹಾರ ಮಂಜೂರಾತಿ ವಹಿ |
| 14. | ಆರಾಧನಾ ತಸ್ತಿಕ್ ಮಂಜೂರಾತಿ ವಹಿ |
| 15. | ಭೂ ಪರಿವರ್ತನೆ ಹಿಂಬರಹ ವಹಿ |
| 16. | ಸೇವಾ ವಹಿಯ ಸಂಚಲನ ವಹಿ |
| 17. | ಭೂ ಸುಧಾರಣಾ ಮಂಜೂರಾತಿ ವಹಿ |

**4.ಬಿ(1)7.**

ಅದರ ಕಾರ್ಯ ನೀತಿಯ ರಚನೆ ಅಥವಾ ಅದರ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರೊಡನೆ ಸಮಾಲೋಚಿಸಲು ಅಥವಾ ಅವರ ಪ್ರಾತಿನಿಧ್ಯವಿರುವಂತೆ ಮಾಡಲು ಇರುವಂಥ ಯಾವುದೇ ವ್ಯವಸ್ಥೆಯ ವಿವರಗಳು.

1) ಅಧೀನ ಕಛೇರಿಗಳಿಂದ ವರದಿ ಪಡೆಯಲು ಕಾಲಾವಧಿ ನಿಗದಿಪಡಿಸುವುದು.

2) ಇಲಾಖೆಯ ಪ್ರಕಾರ್ಯಗಳ ಪ್ರಗತಿ ಪರಿಶೀಲನೆ ಬಗ್ಗೆ ಸಭೆಗಳನ್ನು ಏರ್ಪಡಿಸುವುದು.

3) ಸಾರ್ವಜನಿಕರ ಕುಂದುಕೊರತೆ ಆಲಿಸುವುದು.

4) ಪಾರದರ್ಶಕ ಕಾಯ್ದೆ ಅನುಷ್ಠಾನ

5) ಎಲ್ಲಾ ವರ್ಗದ ಜನರಿಂದ ಸ್ವೀಕರಿಸುವಂತಹ ಅಹವಾಲುಗಳು ಸಾರ್ವಜನಿಕರ ಸಂಘ ಸಂಸ್ಥೆಗಳ ಕುಂದುಕೊರತೆಗಳಲ್ಲದೆ, ಇನ್ನಿತರ ಸಂಘಟನೆಗಳಿಂದ ನಡೆಸುವ ಪ್ರತಿಭಟನೆಗಳ ಅಹವಾಲುಗಳನ್ನು ಸ್ವೀಕರಿಸಿ ಸಂಬಂಧಿಸಿದವರಿಗೆ ರವಾನಿಸಿ ಮಾಹಿತಿ ಪಡೆದು ಪರಿಹಾರ ಒದಗಿಸುವುದಲ್ಲದೆ ಜಿಲ್ಲಾಧಿಕಾರಿಗಳಿಗೆ ವರದಿ ಸಲ್ಲಿಸಲಾಗುತ್ತಿದೆ. ಸಾರ್ವಜನಿಕ ದೂರು ಕೋಶ ಮುಖೇನ ಸ್ವೀಕರಿಸುವ ಅರ್ಜಿಗಳ ಪರಿಶೀಲನೆ ಹಾಗೂ ವಿಲೇವಾರಿ.

6) ಪ್ರಕೃತಿ ವಿಕೋಪ

ಪ್ರಕೃತಿ ವಿಕೋಪಗಳಿಂದ ಅತಿವೃಷ್ಠಿ ಸೇರಿದಂತೆ ಎಲ್ಲಾ ವಿಕೋಪಗಳ ಬಗ್ಗೆ ನಿಯಮಾನುಸಾರ ಪರಿಹಾರ ನೀಡಲಾಗುತ್ತಿದೆ. ಅಲ್ಲದೆ ಸಾರ್ವಜನಿಕರಿಗೆ ಮನವರಿಕೆ ಅಗತ್ಯವಿದ್ದಲ್ಲಿ ಸಂಕಷ್ಟದ ಮಾಹಿತಿ ಪಡೆಯಲು ಹಾಗೂ ತುರ್ತು ಪರಿಹಾರ ನೀಡಲು ತಾಲ್ಲೂಕು ಕಛೇರಿಯಲ್ಲಿ ಕಂಟ್ರೋಲ್ ರೂಂ ತೆರೆಯಲಾಗಿದೆ.

**ತಾಲ್ಲೂಕು ಕಛೇರಿಯ ದೂರವಾಣಿ ಸಂಖ್ಯೆ–958185–221235**

7) ಕರ್ನಾಟಕ ಭೂ ಕಂದಾಯ ಕಾಯಿದೆ ಕಲಂ 94ಸಿ ರಡಿ ಸ್ವೀಕರಿಸಿದ ಅರ್ಜಿಗಳ ವಿಲೇವಾರಿ.

**4.ಬಿ(1)8.**

ಮಂಡಳಿ, ಪರಿಷತ್ತು ಸಮಿತಿಗಳಲ್ಲಿ ಎರಡು ಹಾಗೂ ಅದಕ್ಕಿಂತ ಹೆಚ್ಚಿನ ವ್ಯಕ್ತಿಗಳಿಂದ ರಚಿಸಲಾದ ಸಮಿತಿಯ ಸಲಹೆ ಹಾಗೂ ಸರ್ಕಾರದ ನಡುವಳಿಗಳು.

ಕಛೇರಿಯಲ್ಲಿ ಸರ್ಕಾರದ ಆದೇಶದಂತೆ ಅಕ್ರಮ ಸಕ್ರಮೀಕರಣ ಸಮಿತಿ ಭೂನ್ಯಾಯ ಮಂಡಳಿಯ ಸಮಿತಿ ಆರಾಧನಾ ಸಮಿತಿಗಳು ರಚನೆಯಾಗಿ ಕೆಲಸ ನಿರ್ವಹಿಸಲಾಗುತ್ತಿದೆ.

**4.ಬಿ(1)9:10.**

ತಾಲ್ಲೂಕು ಕಛೇರಿಯ ಅಧಿಕಾರಿಗಳ ಮತ್ತು ನೌಕರರ ಮಾಹಿತಿ ಪುಸ್ತಕ ಮತ್ತು ವೇತನ ವಿವರ. ತಹಶೀಲ್ದಾರ್ ಕಛೇರಿಯ ಮುಖ್ಯಸ್ಥರಾಗಿದ್ದು ಕಛೇರಿಯ ಮುಖ್ಯಸ್ಥರಿಗೆ ಸರ್ಕಾರ ಇಲ್ಲವೇ ಇಲಾಖೆ ನೀಡಿದ ಹಕ್ಕು ಬಾಧ್ಯತೆಗಳಿಗನುಗುಣವಾಗಿ ಕರ್ತವ್ಯ ನಿರ್ವಹಣೆ.

| ಕ್ರ.ಸಂ. | ಅಧಿಕಾರಿ:ನೌಕರರ ಪದನಾಮ | ವೇತನ ಶ್ರೇಣಿ | ಹುದ್ದೆಗಳು |
|---|---|---|---|
| 1. | ತಹಶೀಲ್ದಾರ್ | 11400–12600 | 1 |
| 2. | ತಾಲ್ಲೂಕು ಶಿರಸ್ತೆದಾರ್ | 10000–18150 | 3 |
| 3. | ಉಪ ತಹಶೀಲ್ದಾರ್ | 10000–18150 | 2 |
| 4. | ಪ್ರಥಮದರ್ಜೆ ಸಹಾಯಕರು | 7275–13350 | 5 |
| 5. | ರಾಜಸ್ವ ನಿರೀಕ್ಷಕರು | 7275–13350 | 4 |
| 6. | ಆಹಾರ ನಿರೀಕ್ಷಕರು | 8825–16000 | 1 |
| 7. | ಪ್ರಥಮ ದರ್ಜೆ ಭೂ ಮಾಪಕರು | 7275–13350 | 1 |
| 8. | ಬೆರಳಚ್ಚುಗಾರರು | 5800–10500 | 1 |
| 9. | ದ್ವಿತೀಯದರ್ಜೆ ಸಹಾಯಕರು | 5800–10500 | 11 |
| 10. | ದ್ವಿತೀಯದರ್ಜೆ ಭೂ ಮಾಪಕರು | 5800–10500 | 7 |
| 11. | ಗ್ರಾಮ ಲೆಕ್ಕಿಗರು | 5800–10500 | 33 |
| 12. | ದಫೇದಾರ್ | 5200–8200 | 1 |
| 13. | ಆರ್.ಆರ್.ಅಟೆಂಡರ್ | 5200–8200 | 1 |
| 14. | ವಾಹನ ಚಾಲಕರು | 5800–10500 | 1 |
| 15. | ದಫ್ತರ್ ಬಂದ್ | 5200–8200 | 1 |
| 16. | ಡಿ–ಗ್ರೂಫ್ | 4800–7275 | 7 |
| 17. | ಬಾಂದು ಜವಾನರು | 4800–7275 | 6 |

**4.ಬಿ(1)9:10.**

**2008–09 ನೇ ಸಾಲಿನ ಆಯವ್ಯಯ ಬಗ್ಗೆ ಟಿಪ್ಪಣಿ**

**ಹೊಸನಗರ ತಾಲ್ಲೂಕಿಗೆ ಸಂಬಂಧಪಟ್ಟಂತೆ 2008–09 ನೇ ಸಾಲಿನ ಆಯವ್ಯಯ ಅಂದಾಜು ಈ ಕೆಳಗಿನಂತಿದೆ.**

| ಕ್ರ. ಸಂ. | ಲೆಕ್ಕಶೀರ್ಷಿಕೆ | ವಿವರ | ಆಯವ್ಯಯದ ಅಂದಾಜು ವೆಚ್ಚ ಮೊಬಲಗು |
|---|---|---|---|
| 1. | 2015–00–102–0–01 | ವೇತನ | 5,55,823–00 |
| 2. | 2053–00–094–7–01 | ವೇತನ | 5,41,200–00 |
| 3. | 2053–00–094–7–01 | ವೇತನ | 9,50,511–00 |
| 4. | 2053–00–094–7–01 | ವೇತನ | 1,15,396–00 |
| 5. | 2506–00–101–1–01 | ವೇತನ | 2,72,941–00 |
| 6. | 2053–00–094–7–01 | ವೇತನ | 1,74,594–00 |
| 7. | 2053–00–094–7–01 | ವೇತನ | 25,69,399–00 |
| 8. | 2515–00–101–0–17 | ವೇತನ | 1,58,893–00 |
| 9. | 2071–01–200–0–05 | ವೇತನ | 42,000–00 |
| 10. | 2071–01–200–0–06 | ವೇತನ | 6,60,00–00 |
| 11. | 2408–01–001–0–0–1 | ವೇತನ | 3,66,363–00 |
| 12. | 2029–00–101–01–1 | ವೇತನ | 27,14,586–00 |

**4.ಬಿ(1)14.**

ಕಛೇರಿಯಲ್ಲಿರುವ ಮಾಹಿತಿಯನ್ನು ವೆಬ್‌ಸೈಟ್ ನಲ್ಲಿ ನೀಡಿರುವ ಬಗ್ಗೆ ವಿವರ ಕಛೇರಿಯಲ್ಲಿ ಪಹಣಿ ಮತ್ತು ಖಾತೆ ಬದಲಾವಣೆ ಸಂಬಂಧಿಸಿದಂತೆ "ಕಿಯೋನಿಕ್ಸ ಕೇಂದ್ರ" ತೆರೆಯಲಾಗಿದ್ದು ಜನರಿಗೆ ಪಹಣಿ ಪತ್ರಗಳನ್ನು ನೀಡಲಾಗುತ್ತಿದೆ.

| Sl. No. | Name of the Officer | Designation |
|---|---|---|
| 5. | Shri M.L. Naik | Dy. S.P. Dandeli |
| 6. | Dr. C B Vedhamurthy | Dy. S.P. Bhatkal |
| 7. | Sri. Antony John | CPI, Karwar |
| 8. | Shri Manjunath Kavari | CPI., Kadra |
| 9. | Sri. Gurnath B. Mattur | CPI., Bhatkal |
| 10. | Sri. M. Jagadish | CPI., Honavar |
| 11. | Shri P.A. Suraj | CPI., Kumta |
| 12. | Sri. Karunakar Shetty | CPI., Sirsi |
| 13. | Shri C.C. Sankolli | CPI., Dandeli |
| 14. | Shri Habeeb N.A | CPCI., Haliyal |
| 15. | Shri Vijaykumar Bisanalli | CPI., Joida |
| 16. | Sri. N G Bhaskar Rai | PI ,Ankola |
| 17. | Shri P. Veerendra Kumar | PI Mundgod |
| 18. | Sri. T Nagesh Shetty | PI Siddapur |
| 19. | Shri. Gopalkrishna T. Naik | PI Yellapur |
| 20. | VACANCY | PI, DCRB, Karwar |
| 21. | VACANCY | PI, DSB, Karwar |
| 22. | Sri. Arvind Kalguggi | PI, DCIB Karwar |
| 23. | Sri. A.C. Manjunath | RPI DAR Karwar |
| 24. | Shri Manjunath M. Shuklla | RPI DAR Karwar (MT) |
| 25. | Shri Raghavendra | PSI, Karwar Town |
| 26. | Shri N.G. Mukri | PSI, Karwar Town (Crime) |
| 27. | Shri Nijaguni Rayannavar | PSI, Karwar Town III |
| 28. | Shri Chennesh | PSI, Karwar Rural |
| 29. | Shri Vasant Achari | PSI, Karwar Traffic –1 |
| 30. | Vacant | PSI, Karwar Traffic II |
| 31. | Shri. Johnson Kiran Dsouza | PSI, Chittakula |
| 32. | Shri Krishnand Naik | PSI, Mallapur |
| 33. | Shri P.P. Sannegouda | PSI, Kadra |

| Sl. No. | Name of the Officer | Designation |
|---|---|---|
| 34. | Shri H Jairaj | PSI, Ankola (L&O)-I |
| 35. | Shri Nityanand Pandit | PSI, Ankola (L&O)-1I |
| 36. | Shri S M Raghupati | PSI, Bhatkal Tn (L&O)-I |
| 37. | Shri K.P. Karning | PSI, Bhatkal Tn (L&O)-2 |
| 38. | Vacant | PSI, Bhatkal Town (Crime) |
| 39. | Shri Timmappa Naik | PSI, Bhatkal Rl, (L & O) |
| 40. | Shri Hanumanthrai Patted | PSI, Bhatkal Rural,(Crime) |
| 41. | Shri S K Holennavar | PSI, Murdeshwar (L & O) |
| 42. | Shri Chayappa Bajantri | PSI, Murdeshwar (Crime) |
| 43. | Shri Govindraj Dasari | PSI, Honnavar (L & O) |
| 44. | Shri F.K. Doddameni | PSI, Honavar (Crime) |
| 45. | Shri Ali A Shaikh | PSI, Manki L & O |
| 46. | Shri Rudrappa | PSI, Manki Crime |
| 47. | Shri T.N Narasihm murthy | PSI, Kumta (L&O) |
| 48. | Shri B.D. Madar | PSI, Kumta ( Crime) |
| 49. | Shri Kiran kumar B Nayak | PSI, Gokarn |
| 50. | Shri S.P. Umamahesh | Sirsi Town (L&O) |
| 51. | Shri D.G Madar | PSI, Sirsi Town (Crime) |
| 52. | Shri Manjappa R.D. | PSI, Sirsi Rl (L & O) |
| 53. | Shri Ullas Kalgutkar | PSI, Sirsi Rural (Crime) |
| 54. | Shri H Ravi | PSI, Sirsi NM (L&O) |
| 55. | Shri Somalinga Naikar | PSI, Sirsi NM (Crime) |
| 56. | Shri Shivanand Narabola | PSI, Banavasi, (L& O) |
| 57. | Shri B. S Hulaswar | PSI, Banavasi (Crime) |
| 58. | Shri S.V Patil | PSI, Yellapur |
| 59. | Shri Parmeshwar Gunaga | PSI, Siddapur |
| 60. | Shri Dhiraj Shinde | PSI, Mundgod |
| 61. | Shri Siddappa Shimani | PSI, Haliyal |
| 62. | Shri KR Nadakarni | PSI, Ambikanagar |

| Sl. No. | Name of the Officer | Designation |
|---|---|---|
| 63. | Shri Harihar | PSI, Dandeli Town (L& O) |
| 64. | Shri D.B. Manjrekar | PSI, Dandeli Town (Crime) |
| 65. | Shri. G. K Kamble | PSI, Dandeli Rural |
| 66. | Shri S B Yadagude | PSI, Joida |
| 67. | Shri A.A Mujawar | PSI, Ramanagar |
| 68. | Shri M Manjunath | PSI, DCRB Karwar |
| 69. | Shri N. Anjaneya | PSI, DSAU (OOD) |
| 70. | Shri M.D. Kamane | PSI, Forest Squad Dandeli |
| 71. | Shri Manjunath Naik | PSI, DSB Karwar |
| 72. | VACANT | PSI, DSAU Karwar |
| 73. | VACANT | PSI, Sea Patrol |
| 74. | VACANT | PSI, DSB Tattihalli |
| 75. | Sri Gopal Pawaskar | RSI, DAR Karwar |
| 76. | Shri Shivanand D. Naik | RSI, DAR Karwar |
| 77. | SriPrabhakar D. Revankar | RSI, DAR Karwar |
| 78. | Shri Vasant Borkar | RSI, DAR Karwar |
| 79. | Shri S.M. Kale | RSI, DAR Karwar |
| 80. | Shri Vidyanand Nayak | RSI, DAR Karwar |

**Ministrial Staff of DPO Karwar**

| | | |
|---|---|---|
| 1. | Shri M. M. Naik | AAO. |
| 2. | Shri I.H Gouda | Sec. Sepdt. ( Crime & General Section) |
| 3. | Kum. Vimala J Naik | Sec. Supdt. (EST Section) |
| 4. | Shri P.B. Ugargol | Sec Supdt. (Accounts Section) |
| 5. | Smt Savita M. Naik | FDA |
| 6. | Smt. Sumangala Nayak | FDA |
| 7. | Smt Nagaratna Nayak | FDA |
| 8. | Smt. Manjula Gouda | FDA |
| 9. | Smt Sudha Shetty | FDA |
| 10. | Shri R.S. Naik | FDA |
| 11. | Shri C. M Salunke | FDA |

| Sl. No. | Name of the Officer | Designation |
|---|---|---|
| 12. | Shri Pramod S. Naik | FDA |
| 13. | Shri R.P. Naik | FDA |
| 14. | Shri Ganapati Naik | FDA |
| 15. | Shri Santosh Pattar | FDA |
| 16. | Smt. Geeta Kolambkar | SDA |
| 17. | Smt. Deepti Naik | SDA |
| 18. | Smt. Jayashree Naik | SDA |
| 19. | Smt Sudha Naik | SDA |
| 20. | Shri Anand Naik | SDA |
| 21. | Shri Jagdish Tigadi | SDA |
| 22. | Shri A.D. Naik | SDA |
| 23. | Shri T.D. Patril | SDA |
| 24. | Shri Ramesh Ager | SDA |
| 25. | Shri Vasudev Patagar | SDA |
| 26. | Shri K.G. Naik | Steno |
| 27. | Smt. Chaya Talekar | Steno |
| 26. | Shri Nagendra Gurav | Typist |
| 27. | Shri Deepak Naik | Typist |
| 28. | Shri Shankar Gopal | Typist |
| 29. | Shri Premanand Jadav | Dalayat |
| 30. | Smt. Mahadevi Vastradmath | Dalayat |
| 31. | Smt. Baby Manjalikar | Dalayat |
| 32. | Smt. Jyothilaxmi | Dalayat |

**ಪೋಲಿಸ್ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದವರಿಗೆ ನಿಗದಿಪಡಿಸಿದ ವೇತನ ಶ್ರೇಣಿ**

1) ಎಸ್.ಪಿ. – 15600–39200
2) ಅಡಿಷನಲ್ ಎಸ್.ಪಿ – 18150–26925
3) ಡಿಎಸ್‌ಪಿ – 14050–25050
4) ಪಿ.ಐ. – 10800–20025
5) ಪಿ.ಎಸ್.ಐ – 10000–18150
6) ಎಎಸ್‌ಐ – 7275–13350
7) ಎಚ್‌ಸಿ – 6250–12000
8) ಪಿಸಿ – 5800–10500

9) ಸಹಾಯಕ ಆಡಳಿತ ಅಧಿಕಾರಿ– 11400–21600
10) ಶಾಖಾಧೀಕ್ಷಕರು – 10000–18150
11) ಪ್ರ.ದ.ಸ – 7275–13350
12) ದ್ವಿ.ದ.ಸ – 5800–10500
13) ದಲಾಯತ್ – 4800–7275

ಪಿಂಚಣಿ ಸೌಲಭ್ಯವನ್ನು ನಿಯಮ ಪ್ರಕಾರ ಸಿಬ್ಬಂದಿಯವರಿಗೆ ಕಾಲಕಾಲಕ್ಕೆ ಒದಗಿಸಲಾಗುವುದು.

**ವೇತನದ ಬಜೆಟ್ :**

| ಅ.ನಂ. | ವೇತನದ ವಿವರ | ವೇತನದ ಮುಂಗಡ |
|---|---|---|
| 1. | ಪೋಲಿಸ್ ಅಧಿಕಾರಿ ಹಾಗೂ ಸಿಬ್ಬಂದಿಯವರ ವೇತನ | ರೂ. 31,62,45,130–00 |
| 2. | ನಾನ್ ಸ್ಯಾಲರಿ (ಸಾದಿಲ್ವಾರು) | ರೂ. 6,73,40,848–00 |

**ಅಧಿಸೂಚನೆ :**

ಮಾಹಿತಿ ಹಕ್ಕು ಅಧಿನಿಯಮ–2005 ರ ಕಲಂ 5 (1) ಮತ್ತು ಕಲಂ 5 (2) ರ ಪ್ರಕಾರ ಉತ್ತರ ಕನ್ನಡ ಜಿಲ್ಲಾ ಪೋಲಿಸ್ ಅಡಿಯಲ್ಲಿ ಬರುವ ಕೆಳಕಂಡ ವಿವಿಧ ಪೋಲಿಸ್ ಠಾಣೆ / ವೃತ್ತ ಕಛೇರಿ, ಉಪ ವಿಭಾಗ ಕಛೇರಿ, ಮತ್ತು ಜಿಲ್ಲಾ ಪೋಲಿಸ್ ಕಛೇರಿಯ ಕೆಳಕಂಡ ಅಧಿಕಾರಿಗಳನ್ನು ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ ಘೋಷಿಸಲಾಗಿದೆ. ಮುಂದುವರೆದ ಮಾಹಿತಿ ಹಕ್ಕು ಅಧಿನಿಯಮ 2005 ಕಲಂ 19 (1) ರ ಪ್ರಕಾರ ಮೇಲ್ಮನವಿ ಪ್ರಾಧಿಕಾರಿಯನ್ನು ಈ ಕೆಳಗೆ ನಮೂದಿಸಿದಂತೆ ನೇಮಿಸಲಾಗಿದೆ.

| ಅ. ನಂ. | ಜಿಲ್ಲಾ ಪೋಲಿಸ್ ಕಛೇರಿ / ಉಪ ವಿಭಾಗ ಕಛೇರಿ/ ವೃತ್ತ ಕಛೇರಿ/ ಪೋಲಿಸ್ ಠಾಣೆ/ ಘಟಕ | ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರಿಗಳು | ದೂರವಾಣಿ ಸಂಖ್ಯೆ |
|---|---|---|---|---|
| **1** | **2** | **3** | **4** | **5** |
| 1. | ಜಿಲ್ಲಾ ಪೋಲಿಸ್ ಕಛೇರಿ | ಸಹಾಯಕ ಆಡಳಿತಾಧಿಕಾರಿ (ಎ.ಎ.ಓ) | ಪೋಲಿಸ್ ಅಧೀಕ್ಷಕರು ಜಿಲ್ಲಾ ಪೋಲಿಸ್ ಕಛೇರಿ, ಕಾರವಾರ. | 226307 |
| 2. | ಕಾರವಾರ ಉಪವಿಭಾಗ | ಡಿ.ಎಸ್.ಪಿ. ಕಾರವಾರ ರವರ ಹಿರಿಯ ಬರಹಗಾರ | ಡಿ.ಎಸ್.ಪಿ. ಕಾರವಾರ | 226416 |
| 3. | ಭಟ್ಕಳ ಉಪವಿಭಾಗ | ಡಿ.ಎಸ್.ಪಿ. ಭಟ್ಕಳ ರವರ ಹಿರಿಯ ಬರಹಗಾರ | ಡಿ.ಎಸ್.ಪಿ. ಭಟ್ಕಳ | 226413 |
| 4. | ಶಿರಸಿ ಉಪವಿಭಾಗ | ಡಿ.ಎಸ್.ಪಿ. ಶಿರಸಿ ರವರ ಹಿರಿಯ ಬರಹಗಾರ | ಡಿ.ಎಸ್.ಪಿ. ಶಿರಸಿ | 226424 |
| 5. | ದಾಂಡೇಲಿ ಉಪವಿಭಾಗ | ಡಿ.ಎಸ್.ಪಿ. ದಾಂಡೇಲಿ ರವರ ಹಿರಿಯ ಬರಹಗಾರ | ಡಿ.ಎಸ್.ಪಿ. ದಾಂಡೇಲಿ | 231595 |
| 6. | ಕಾರವಾರ ವೃತ್ತ | ಕಾರವಾರ ವೃತ್ತದ ಮುಖ್ಯ ಕಾನ್ಸಟೇಬಲ್/ಬರಹಗಾರ | ವೃತ್ತ ನಿರೀಕ್ಷಕರು ಕಾರವಾರ. | 225337 |
| 7. | ಕದ್ರಾ ವೃತ್ತ | ಕದ್ರಾ ವೃತ್ತದ ಮುಖ್ಯ ಕಾನ್ಸಟೇಬಲ್/ಬರಹಗಾರ | ವೃತ್ತ ನಿರೀಕ್ಷಕರು ಕದ್ರಾ. | 256592 |
| 8. | ಕುಮಟಾ ವೃತ್ತ | ಕುಮಟಾ ವೃತ್ತದ ಮುಖ್ಯ ಕಾನ್ಸಟೇಬಲ್/ಬರಹಗಾರ | ವೃತ್ತ ನಿರೀಕ್ಷಕರು ಕುಮಟಾ | 220233 |
| 9. | ಹೊನ್ನಾವರ ವೃತ್ತ | ಹೊನ್ನಾವರ ವೃತ್ತದ ಮುಖ್ಯ ಕಾನ್ಸಟೇಬಲ್/ಬರಹಗಾರ | ವೃತ್ತ ನಿರೀಕ್ಷಕರು ಹೊನ್ನಾವರ | 220248 |
| 10. | ಭಟ್ಕಳ ವೃತ್ತ | ಭಟ್ಕಳ ವೃತ್ತದ ಮುಖ್ಯ ಕಾನ್ಸಟೇಬಲ್/ಬರಹಗಾರ | ವೃತ್ತ ನಿರೀಕ್ಷಕರು ಭಟ್ಕಳ | 226813 |
| 11. | ಶಿರಸಿ ವೃತ್ತ | ಶಿರಸಿ ವೃತ್ತದ ಮುಖ್ಯ ಕಾನ್ಸಟೇಬಲ್/ಬರಹಗಾರ | ವೃತ್ತ ನಿರೀಕ್ಷಕರು ಶಿರಸಿ. | 226260 |

| ಅ. ನಂ. | ಜಿಲ್ಲಾ ಪೋಲಿಸ್ ಕಛೇರಿ / ಉಪ ವಿಭಾಗ ಕಛೇರಿ/ ವೃತ್ತ ಕಛೇರಿ/ ಪೋಲಿಸ್ ಠಾಣೆ/ ಘಟಕ | ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರಿಗಳು | ದೂರವಾಣಿ ಸಂಖ್ಯೆ |
|---|---|---|---|---|
| 12. | ದಾಂಡೇಲಿ ವೃತ್ತ | ದಾಂಡೇಲಿ ವೃತ್ತದ ಮುಖ್ಯ ಕಾನ್ಸಟೇಬಲ್/ಬರಹಗಾರ | ವೃತ್ತ ನಿರೀಕ್ಷಕರು ದಾಂಡೇಲಿ | 231363 |
| 13. | ಹಳಿಯಾಳ ವೃತ್ತ | ಹಳಿಯಾಳ ವೃತ್ತದ ಮುಖ್ಯ ಕಾನ್ಸಟೇಬಲ್/ಬರಹಗಾರ | ವೃತ್ತ ನಿರೀಕ್ಷಕರು ಹಳಿಯಾಳ | 220333 |
| 14. | ಜೋಯಿಡಾ ವೃತ್ತ | ಜೋಯಿಡಾ ವೃತ್ತದ ಮುಖ್ಯ ಕಾನ್ಸಟೇಬಲ್/ಬರಹಗಾರ | ವೃತ್ತ ನಿರೀಕ್ಷಕರು ಜೋಯಿಡಾ | 282733 |
| 15. | ಅಂಕೋಲಾ ಠಾಣೆ | ಪಿ.ಎಸ್.ಐ. ಅಂಕೋಲಾ (ಕಾ & ಸು.) | ಪಿ.ಐ. ಅಂಕೋಲಾ | 230333 |
| 16. | ಸಿದ್ದಾಪೂರ ಠಾಣೆ | ಪಿ.ಎಸ್.ಐ. ಸಿದ್ದಾಪೂರ | ಪಿ.ಐ. ಸಿದ್ದಾಪೂರ | 230283 |
| 17. | ಯಲ್ಲಾಪೂರ ಠಾಣೆ | ಪಿ.ಎಸ್.ಐ. ಯಲ್ಲಾಪೂರ | ಪಿ.ಐ. ಯಲ್ಲಾಪೂರ | 254812 |
| 18. | ಮುಂಡಗೋಡ ಠಾಣೆ | ಪಿ.ಎಸ್.ಐ. ಮುಂಡಗೋಡ | ಪಿ.ಐ. ಮುಂಡಗೋಡ | 222211 |
| 19. | ಕಾರವಾರ ಶಹರ ಠಾಣೆ | ಹಿರಿಯ ಎಎಸ್ಐ ಕಾರವಾರ ಶಹರ | ಪಿಎಸ್ಐ ಕಾರವಾರ ಶಹರ (ಕಾ & ಸು.) | 226333 |
| 20. | ಕಾರವಾರ ಗ್ರಾಮೀಣ ಠಾಣೆ | ಹಿರಿಯ ಎಎಸ್ಐ ಕಾರವಾರ ಗ್ರಾಮೀಣ | ಪಿಎಸ್ಐ ಕಾರವಾರ ಗ್ರಾಮೀಣ | 225337 |
| 21. | ಕಾರವಾರ ಸಂಚಾರ ಠಾಣೆ | ಹಿರಿಯ ಎಎಸ್ಐ ಕಾರವಾರ ಸಂಚಾರ | ಪಿಎಸ್ಐ ಕಾರವಾರ ಸಂಚಾರ | 228333 |
| 22. | ಚಿತ್ತಾಕುಲ ಪೋಲಿಸ್ ಠಾಣೆ | ಹಿರಿಯ ಎಎಸ್ಐ ಚಿತ್ತಾಕುಲ | ಪಿಎಸ್ಐ ಚಿತ್ತಾಕುಲ | 265733 |
| 23. | ಕದ್ರಾ ಪೋಲಿಸ್ ಠಾಣೆ | ಹಿರಿಯ ಎಎಸ್ಐ ಕದ್ರಾ | ಪಿಎಸ್ಐ ಕದ್ರಾ | 258592 |
| 24. | ಮಲ್ಲಾಪುರ ಪೋಲಿಸ್ ಠಾಣೆ | ಹಿರಿಯ ಎಎಸ್ಐ ಮಲ್ಲಾಪೂರ | ಪಿಎಸ್ಐ ಮಲ್ಲಾಪೂರ | 254812 |
| 25. | ಕುಮಟಾ ಪೋಲಿಸ್ ಠಾಣೆ | ಹಿರಿಯ ಎಎಸ್ಐ ಕುಮಟಾ | ಪಿಎಸ್ಐ ಕುಮಟಾ (ಕಾ & ಸು.) | 222333 |
| 26. | ಗೋಕರ್ಣ ಪೋಲಿಸ್ ಠಾಣೆ | ಹಿರಿಯ ಎಎಸ್ಐ ಗೋಕರ್ಣ | ಪಿಎಸ್ಐ ಗೋಕರ್ಣ | 251133 |
| 27. | ಹೊನ್ನಾವರ ಪೋಲಿಸ್ ಠಾಣೆ | ಹಿರಿಯ ಎಎಸ್ಐ ಹೊನ್ನಾವರ | ಪಿಎಸ್ಐ ಹೊನ್ನಾವರ (ಕಾ & ಸು.) | 220248 |
| 28. | ಮಂಕಿ ಠಾಣೆ | ಹಿರಿಯ ಎಎಸ್ಐ ಮಂಕಿ | ಪಿಎಸ್ಐ ಮಂಕಿ (ಕಾ & ಸು.) | 257886 |
| 29. | ಭಟ್ಕಳ ಶಹರ ಠಾಣೆ | ಹಿರಿಯ ಎಎಸ್ಐ ಭಟ್ಕಳ | ಪಿಎಸ್ಐ ಭಟ್ಕಳ (ಕಾ & ಸು.) | 226333 |
| 30. | ಭಟ್ಕಳ ಗ್ರಾಮೀಣ ಠಾಣೆ | ಹಿರಿಯ ಎಎಸ್ಐ ಭಟ್ಕಳ ಗ್ರಾಮೀಣ ಠಾಣೆ | ಪಿಎಸ್ಐ ಭಟ್ಕಳ ಗ್ರಾಮೀಣ ಠಾಣೆ (ಕಾ & ಸು.) | 227333 |
| 31 | ಮುರ್ಡೇಶ್ವರ ಠಾಣೆ | ಹಿರಿಯ ಎಎಸ್ಐ ಮುರ್ಡೇಶ್ವರ | ಪಿಎಸ್ಐ ಮುರ್ಡೇಶ್ವರ (ಕಾ & ಸು.) | 268896 |

| ಅ. ನಂ. | ಜಿಲ್ಲಾ ಪೋಲಿಸ್ ಕಛೇರಿ / ಉಪ ವಿಭಾಗ ಕಛೇರಿ/ ವೃತ್ತ ಕಛೇರಿ/ ಪೋಲಿಸ್ ಠಾಣೆ/ ಘಟಕ | ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರಿಗಳು | ದೂರವಾಣಿ ಸಂಖ್ಯೆ |
|---|---|---|---|---|
| 32. | ಶಿರಸಿ ಶಹರ ಠಾಣೆ | ಹಿರಿಯ ಎಎಸ್ಐ ಶಿರಸಿ ಶಹರ ಠಾಣೆ | ಪಿಎಸ್ಐ ಶಿರಸಿ ಶಹರ ಠಾಣೆ (ಕಾ & ಸು.) | 226333 |
| 33. | ಶಿರಸಿ ಗ್ರಾಮೀಣ ಠಾಣೆ | ಹಿರಿಯ ಎಎಸ್ಐ ಶಿರಸಿ ಗ್ರಾಮೀಣ ಠಾಣೆ | ಪಿಎಸ್ಐ ಶಿರಸಿ ಗ್ರಾಮೀಣ ಠಾಣೆ (ಕಾ & ಸು.) | 236233 |
| 34. | ಶಿರಸಿ ಹೊಸಮಾರುಕಟ್ಟೆ | ಹಿರಿಯ ಎಎಸ್ಐ ಶಿರಸಿ ಹೊಸಮಾರುಕಟ್ಟೆ | ಪಿಎಸ್ಐ ಶಿರಸಿ ಶಿರಸಿ ಹೊಸಮಾರುಕಟ್ಟೆ (ಕಾ & ಸು.) | 236330 |
| 35. | ಬನವಾಸಿ ಠಾಣೆ | ಹಿರಿಯ ಎಎಸ್ಐ ಬನವಾಸಿ ಠಾಣೆ | ಪಿಎಸ್ಐ ಬನವಾಸಿ ಠಾಣೆ (ಕಾ & ಸು.) | 264210 |
| 26. | ದಾಂಡೇಲಿ ಶಹರ | ಹಿರಿಯ ಎಎಸ್ಐ ದಾಂಡೇಲಿ ಶಹರ | ಪಿಎಸ್ಐ ದಾಂಡೇಲಿ ಶಹರ (ಕಾ & ಸು.) | 231333 |
| 27. | ದಾಂಡೇಲಿ ಗ್ರಾಮೀಣ | ಹಿರಿಯ ಎಎಸ್ಐ ದಾಂಡೇಲಿ ಗ್ರಾಮೀಣ | ಪಿಎಸ್ಐ ದಾಂಡೇಲಿ ಗ್ರಾಮೀಣ | 231363 |
| 28. | ಹಳಿಯಾಳ ಠಾಣೆ | ಹಿರಿಯ ಎಎಸ್ಐ ಹಳಿಯಾಳ | ಪಿಎಸ್ಐ ಹಳಿಯಾಳ | 220333 |
| 29. | ಅಂಬಿಕಾ ನಗರ ಠಾಣೆ | ಹಿರಿಯ ಎಎಸ್ಐ ಅಂಬಿಕಾ ನಗರ | ಪಿಎಸ್ಐ ಅಂಬಿಕಾ ನಗರ | 258733 |
| 30. | ಜೋಯಿಡಾ ಠಾಣೆ | ಹಿರಿಯ ಎಎಸ್ಐ ಜೋಯಿಡಾ | ಪಿಎಸ್ಐ ಜೋಯಿಡಾ | 282733 |
| 31. | ರಾಮನಗರ ಠಾಣೆ | ಹಿರಿಯ ಎಎಸ್ಐ ರಾಮನಗರ | ಪಿಎಸ್ಐ ರಾಮನಗರ | 248133 |

**ಉತ್ತರ ಕನ್ನಡ ಜಿಲ್ಲಾ ಪೋಲಿಸ್ ವ್ಯವಸ್ಥೆ ವಿವರ ಹಾಲಿ ಇರುವ ಬಲ ಮತ್ತು ರಿಕ್ತ ಸ್ಥಾನಗಳ ವಿವರ (30.06.2009 ರಲ್ಲಿರುವಂತೆ)**

**ನಾಗರಿಕ ಪೋಲಿಸ್ ವ್ಯವಸ್ಥೆ**

| ಹುದ್ದೆ | ಮಂಜೂರಾತಿ ಬಲ | ಹಾಲಿ ಇರುವ ಬಲ | ಖಾಲಿ ಇರುವ ಸ್ಥಾನ |
|---|---|---|---|
| ಎಸ್.ಪಿ. | 1 | 1 | – |
| ಎ.ಎಸ್.ಪಿ. | 1 | 1 | – |
| ಡಿ.ಎಸ್.ಪಿ. | 4 | 4 | – |
| ಪಿಐ/ಸಿಪಿಐ | 16 | 14 | 02 |
| ಪಿಎಸ್ಐ<br>ಡಬ್ಲ್ಯೂಪಿ.ಎಸ್.ಐ. | 49<br>01 } 50 | 45<br>– } 45 | 05 |
| ಎ.ಎಸ್.ಐ.<br>ಡಬ್ಲ್ಯೂಎ.ಎಸ್.ಐ | 64<br>02 } 66 | 62<br>04 } 66 | – |
| ಸಿ.ಎಚ್.ಸಿ.<br>ಡಬ್ಲ್ಯೂಎಚ್.ಸಿ. | 277<br>23 } 300 | 275<br>22 } 297 | 03 |
| ಸಿ.ಪಿ.ಸಿ.<br>ಡಬ್ಲ್ಯೂಪಿ.ಸಿ. | 854<br>70 } 924 | 799<br>98 } 897 | 27 |
| **ಒಟ್ಟು** | **1362** | **1325** | **37** |

ಡಿ.ಎ.ಆರ್.

| ಕ್ರ ಸಂ. | ಹುದ್ದೆ | ಮಂಜೂರಾತಿ ಬಲ | ಹಾಲಿ ಇರುವ ಬಲ | ಖಾಲಿ ಸ್ಥಾನ |
|---|---|---|---|---|
| 1. | ಆರ್.ಪಿ.ಐ. | 2 | 2 | – |
| 2. | ಆರ್.ಎಸ್.ಐ. | 7 | 6 | 1 |
| 3. | ಎ.ಆರ್.ಎಸ್.ಐ | 12 | 12 | – |
| 4. | ಎ.ಎಚ್.ಸಿ. | 79 | 65 | 14 |
| 5. | ಎ.ಪಿ.ಸಿ | 344 | 306 | 38 |
| 6. | ಕ್ಯಾಂಟಿನ ಕುಕ್ | 2 | 1 | 1 |
| 7. | ಕ್ಯಾಂಟಿನ್ ಸರ್ವಂಟ್ | 1 | – | 1 |
| 8. | ಗ್ಯಾರೇಜ್ ಅಸಿಸ್ಟಂಟ್ | 1 | – | 1 |
| 9. | ಮೊಚಿ | 1 | – | 1 |
| | **ಒಟ್ಟು** | **449** | **392** | **57** |

ನಿಸ್ತಂತು

| ಕ್ರ. ಸಂ | ಹುದ್ದೆ | ಮಂಜೂರಾತಿ ಬಲ | ಹಾಲಿ ಇರುವ ಬಲ | ರಿಕ್ತ ಸ್ಥಾನ |
|---|---|---|---|---|
| 1. | ಪೊ.ನಿರೀಕ್ಷಕರು (ನಿ) | 1 | 1 | – |
| 2. | ಪೊ.ಉ.ನಿರೀಕ್ಷಕರು(ನಿ) | 4 | 1 | 3 |
| 3. | ಎ.ಎಸ್.ಐ. (ನಿ) | 8 | 8 | – |
| 4. | ಎಚ್.ಸಿ. (ನಿ) | 14 | 10 | 4 |
| 5. | ಪಿ.ಸಿ. (ನಿ) | 10 | 4 | 6 |
| | **ಒಟ್ಟು** | **37** | **24** | **13** |

<u>ಕಡಲು ಪಡೆ.</u>

| ಕ್ರ. ಸಂ. | ಹುದ್ದೆ | ಮಂಜೂರಾತಿ ಬಲ | ಹಾಲಿ ಇರುವ ಬಲ | ರಿಕ್ತ ಸ್ಥಾನ |
|---|---|---|---|---|
| 1. | ಎಂ.ಎಲ್.ಡ್ರೈವರ್ | 03 | 02 | 01 |
| 2. | ಸಾರಂಗ | 02 | – | 02 |
| 3. | ಡಿಂಗಿ ಡ್ರೈವರ್ | 03 | 01 | 02 |
| 4. | ಹೆಲ್ಮಮೆನ್ | 01 | – | 01 |
| 5. | ಖಲಾಸಿ | 08 | 02 | 06 |
| | **ಒಟ್ಟು** | **17** | **5** | **12** |

ಬೆರಳು ಮುದ್ರೆ ಘಟಕ

| ಕ್ರ. ಸಂ. | ಹುದ್ದೆ | ಮಂಜೂರಾತಿ ಬಲ | ಹಾಲಿ ಇರುವ ಬಲ | ರಿಕ್ತ ಸ್ಥಾನ |
|---|---|---|---|---|
| 1. | ಪೊಲೀಸ್ ನಿರೀಕ್ಷಕರು. | 1 | – | 1 |
| 2. | ಪೊಲೀಸ್ ಉಪ–ನಿರೀಕ್ಷಕರು | 1 | – | 1 |
| 3. | ಸಿ.ಪಿ.ಸಿ. | 2 | – | 2 |
| | **ಒಟ್ಟು** | **4** | **–** | **4** |

ಲಿಪಿಕ ಸಿಬ್ಬಂದಿ

| ಕ್ರ.ಸಂ. | ಹುದ್ದೆ | ಮಂಜೂರಾತಿ ಬಲ | ಹಾಲಿ ಇರುವ ಬಲ | ರಿಕ್ತ ಸ್ಥಾನ |
|---|---|---|---|---|
| 1. | ಸಹಾಯಕ ಆಡಳಿತಾಧಿಕಾರಿ | 1 | 1 | – |
| 2. | ಶಾಖಾಧಿಕಾರಿ | 3 | 3 | – |
| 3. | ಪ್ರ.ದ.ಸ. | 12 | 11 | 01 |
| 4. | ದ್ವಿ.ದ.ಸ. | 11 | 10 | 01 |
| 5. | ಹಿರಿಯ ಶೀಘ್ರ ಲಿಪಿಗಾರರು | 2 | 2 | – |
| 7. | ಬೆರಳಚ್ಚುಗಾರರು | 4 | 3 | 01 |
| 8. | ದಲಾಯತ್ | 5 | 4 | 01 |
| 9. | ಸ್ವಿಪರ್ | 21 | 8 | 13 |
| | ಒಟ್ಟು | **59** | **42** | **17** |

ವಿಶೇಷ ಪ್ರತಿಭಂದಕ ದಳ ( ಸರಾಯಿ ಮತ್ತು ಲಾಟರಿ)

| ಹುದ್ದೆ | ಮಂಜೂರಾತಿ ಬಲ | ಹಾಲಿ ಇರುವ ಬಲ | ಖಾಲಿ ಇರುವ ಸ್ಥಾನ |
|---|---|---|---|
| ಪಿ.ಐ | 01 | 01 | – |
| ಪಿ.ಎಸ್ಐ | 11 | – | 11 |
| ಆರ್ಎಸ್ಐ | 01 | – | 01 |
| ಸಿ.ಹೆಚ್ಸಿ | 22 | – | 22 |
| ಸಿಪಿಸಿ | 69 | 37 | 32 |
| ಮಪಿಸಿ | 22 | – | 22 |
| ಎ.ಹೆಚ್ಸಿ | 29 | – | 29 |
| ಎ.ಪಿಸಿ | 91 | 75 | 16 |
| ಡ್ರೈವರ್ | 13 | – | 13 |
| ಬೆರಳಚ್ಚುಗಾರ | 01 | 01 | – |
| ಒಟ್ಟು | **260** | **114** | **146** |

ಪೋಲಿಸ್ ಅಧೀಕ್ಷಕರು
ಪಿ.ಆರ್.794 ಉತ್ತರ ಕನ್ನಡ, ಕಾರವಾರ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್ಡಿಕೆ/548/ಡಿಟಿಸಿಆರ್/99–2000, ದಿನಾಂಕ:16ನೇ ಜೂನ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಅಬಕಾರಿ ನಿರೀಕ್ಷಕರು(3), ಗುಪ್ತ ವಾರ್ತ ದಳ ಮಂಗಳೂರು, ಮಂಗಳೂರು.

**ಆರೋಪಿ:**
1) ಲಿಂಗೇ ಗೌಡ,ಬಿನ್:ಸಿದ್ದಪ್ಪ
ಬೇಗೂರು ಗ್ರಾಮ, ನೆಲಮಂಗಲ ಅಂಚೆ, ಬೆಂಗಳೂರು.
2) ಸಿದ್ದಪ್ಪ ಬಿನ್:ತಿಮ್ಮ ರಾಯಪ್ಪ, ವೀರಸಾಗರ ಗ್ರಾಮ, ದಾಬಸ್‌ಪೇಟೆ ಅಂಚೆ, ನೆಲಮಂಗಲ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

**ವಾಹನದ ಮಾಲೀಕರು:**
ಶ್ರೀ ಜಿ.ಎಸ್. ಗಂಗಯ್ಯ ಬಿನ್:ತೋಪಯ್ಯ,
ಪಬ್ಲಿಕ್ ರೋಡ್ ಲೈನ್ಸ್, 18ನೇ ಕಿ.ಮೀ.
ತುಮಕೂರು ರಸ್ತೆ, ಮಾದನಾಯಕನ ಹಳ್ಳಿ,
ಮಾದಾವರ ಅಂಚೆ, ಬೆಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ನಿರೀಕ್ಷಕರು(3), ಗುಪ್ತ ವಾರ್ತದಳ, ಮಂಗಳೂರುರವರು ದಿನಾಂಕ:08.05.2000 ರಂದು ಹಗಲು 11.45 ಗಂಟೆ ಸಮಯಕ್ಕೆ ಮಂಗಳೂರು ಮಹಾನಗರ ಪಾಲಿಕೆಯ ಪಂಪ್‌ವೆಲ್ ರಸ್ತೆಯ ಬಳಿ ರಾಷ್ಟ್ರೀಯ ಹೆದ್ದಾರಿ 17ರಲ್ಲಿ ಕಾರ್ಯ ನಿಮಿತ್ತ ಹೋಗುತ್ತಿರುವಾಗ ಉಳ್ಳಾಲದ ಕಡೆಗೆ ಹೋಗುವ ರಸ್ತೆಯಲ್ಲಿ ವಾಹನ ಸಂ:KA-02A-5687 ಲಾರಿ ನಿಂತಿದ್ದು, ಲಾರಿಯಲ್ಲಿ ಚಾಲಕನಲ್ಲದೇ ಆತನ ಎಡಬದಿಯಲ್ಲಿ ಇನ್ನೊಬ್ಬ ವ್ಯಕ್ತಿ ಕುಳಿತ್ತಿದ್ದು, ಚಾಲಕನಲ್ಲಿ ಲಾರಿಯಲ್ಲಿರುವ ಸರಕಿನ ಬಗ್ಗೆ ವಿಚಾರಿಸಲಾಗಿ ಸುಣ್ಣದ ಪೌಡರ್ ಎಂದು ಉತ್ತರಿಸಿ ದಾಖಲೆ ಪತ್ರಗಳನ್ನು ಕೇಳಲಾಗಿ ಮೆ:ಗೋವಿಂದ ಇಂಡಸ್ಟ್ರೀಸ್, ಬೆಂಗಳೂರು ಇಲ್ಲಿಂದ ಮಂಗಳೂರು ಮಾರ್ಕೆಟ್ ರಸ್ತೆಯಲ್ಲಿರುವ ಹಾರ್ಡ್‌ವೇರ್ ಸ್ಟೋರಿಗೆ 25x 360 ಬ್ಯಾಗ್‌ಗಳಲ್ಲಿ ಒಟ್ಟು 9000 ಕೆ.ಜಿ ಸುಣ್ಣದ ಪೌಡರ್ ಸಾಗಣಿಕೆ ಬಗ್ಗೆ (ಇನ್ವಾಯ್ಸ್) ದಾಖಲೆಗಳು ಇರುವುದು ಕಂಡು ಬಂದಿದ್ದು, ಸರಕಿನ ಒಳಗಿನಿಂದ

ಸ್ಪಿರಿಟ್ ವಾಸನೆ ಬರುತ್ತಿದ್ದು ಚಾಲಕ ಮತ್ತು ಇನ್ನೊಬ್ಬ ವ್ಯಕ್ತಿ ತುಂಬಾ ಗಾಬರಿಗೊಂಡಂತೆ ಕಂಡುಬಂದು ಅನುಮಾನಗೊಂಡು ಲಾರಿ ಶೋಧನೆಗೆ ನ್ಯಾಯಾಲಯದ ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲದಿರುವುದರಿಂದ ಸರ್ಚ್ ಮೆಮೊ ಆಧಾರದಲ್ಲಿ ಪರಿಶೀಲನೆ ನಡೆಸಿದಾಗ ಸುಣ್ಣದ ಪೌಡರ್ ಸರಕಿನ ಅಡಿಯಲ್ಲಿ 35 ಲೀಟರು ಗಾತದ 211 ಕ್ಯಾನುಗಳಲ್ಲಿ 7385 ಲೀಟರು, 3 ಕ್ಯಾನುಗಳಲ್ಲಿ 90 ಲೀಟರು ಮತ್ತು 1 ಕ್ಯಾನಿನಲ್ಲಿ 25 ಲೀಟರಿನಂತೆ ಒಟ್ಟು 215 ಪ್ಲಾಸ್ಟಿಕ್ ಕ್ಯಾನುಗಳಲ್ಲಿ 7500 ಲೀಟರು ಮದ್ಯಸಾರ ಅಕಮವಾಗಿ ಹೊಂದಿ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಅರೋಪಿಗಳಾದ 1) ಲಿಂಗೇಗೌಡ, ಬಿನ್:ಸಿದ್ದಪ್ಪ ಬೇಗೂರು ಗಾಮ, ನೆಲಮಂಗಲ ಅಂಚೆ, ಬೆಂಗಳೂರು 2) ಸಿದ್ದಪ್ಪ ಬಿನ್:ತಿಮ್ಮರಾಯಪ್ಪ, ವೀರಸಾಗರ ಗಾಮ, ದಾಬಸ್‌ಪೇಟೆಅಂಚೆ, ನೆಲಮಂಗಲ, ಬೆಂಗಳೂರು ಗಾಮಾಂತರಜಿಲ್ಲೆ ಮತ್ತು ವಾಹನದಲ್ಲಿ ದೊರೆತ ಆರ್.ಸಿ ಮಸ್ತಕದ ಆಧಾರದಲ್ಲಿ ಆರ್.ಸಿ ಮಾಲೀಕರಾದ ಶೀ ಜಿ.ಎಸ್. ಗಂಗಯ್ಯ ಬಿನ್ ತೋಪಯ್ಯ, ಪಬ್ಲಿಕ್ ರೋಡ್ ಲೈನ್ಸ್, 18ನೇ ಕಿ.ಮೀಟರು, ತುಮಕೂರು ರಸ್ತೆ, ಮಾದನಾಯಕನಹಳ್ಳಿ ಮಾದಾವರ ಅಂಚೆ, ಬೆಂಗಳೂರು ಇವರುಗಳು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 13, 14ರ ಪಕಾರ ಅಪರಾಧ ಮಾಡಿದ್ದು, ಕಲಂ 32,34 ಮತ್ತು 38 ಎರ ಪಕಾರ ಶಿಕ್ಷಾರ್ಹವಾಗಿರುವುದರಿಂದ ಸದಿ ವಾಹನ ಮತ್ತು 7500.000ಲೀ ಮದ್ಯಸಾರ ಮತ್ತು ಇತರ ಸೊತ್ತುಗಳನ್ನು ಜಪ್ತಿ ಪಡಿಸಿಕೊಂಡು, ಆರೋಪಿಗಳ ವಿರುದ್ಧ ಪ.ಮಾ.ವ ಸಂಖ್ಯೆ:36/99–2000,ದಿನಾಂಕ:8–5–2000ರಂದು ಮೊಕದ್ದಮೆಯನ್ನು ದಾಖಲಿಸಿ ಕೊಂಡು ಪಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಪಕರಣದ ಮುಂದಿನ ತನಿಖೆಯ ಬಗ್ಗೆ ಸೊತ್ತು ಮತ್ತು ಕಡತಗಳನ್ನು ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯ ಇವರಿಗೆ ದಿ:29–5–2000 ರಂದು ಹಸ್ತಾಂತರಿಸಿರುತ್ತಾರೆ.

**ವಶಪಡಿಸಿಕೊಂಡ ಸೊತ್ತುಗಳು**

1) ಲಾರಿ ಸಂ: KA-02-A-5687.

2) 35 ಲೀಟರು ಗಾತದ 215 ಪ್ಲಾಸ್ಟಿಕ್ ಕ್ಯಾನುಗಳಲ್ಲಿ 7500 ಲೀಟರು ಮದ್ಯಸಾರ. (211x35+3x30+1x25 )

3) 142 ಪಾಲಿಥಿನ್ ಚೀಲಗಳಲ್ಲಿ ಅಂದಾಜು ತಲಾ 25 ಕೆ.ಜಿ ಯಂತೆ ಸುಣ್ಣದ ಪೌಡರ್.

4) ಮೆ:ಗೋವಿಂದ ಇಂಡಸ್ಟ್ರೀಸ್ ಪ್ಲಾಟ್ ನಂ:875 ಇಂಡಸ್ಟ್ರೀಯಲ್ ಎಸ್ಟೇಟ್, ಆನೇಕಲ್ಲು, ಬೆಂಗಳೂರು ಇವರು ನೀಡಿರುವ ಸುಣ್ಣದ ಪೌಡರಿಗೆ ಸಂಬಂಧಿಸಿದ ಇನ್ ವಾಯ್ಸ್ ಸಂ:91/2000–01 ದಿನಾಂಕ:06.05.2000.

(ಮೇಲಿನ ಮದ್ಯಸಾರದಿಂದ 375 ಮಿಲಿಯ 215 ಸೀಸೆಗಳನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಮಾದರಿ ತೆಗೆಯಲಾಗಿದೆ.)

5) ವಾಹನಕ್ಕೆ ಸಂಬಂಧಿಸಿದ ದಾಖಲಾತಿಗಳು 1) ವಾಹನದ ನೊಂದಣಿ ಮಸ್ತಕ ಸಂ:299–829 2) ಇನ್ಶೂರೆನ್ಸ್ ಪಾಲಿಸಿ ಸರ್ಟಿಫಿಕೇಟು ಸಂ:7763, 3) ವಾಹನ ಚಾಲಕನ ಡ್ರೈವಿಂಗ್ ಲೈಸೆನ್ಸ್ ಮಸ್ತಕ ನಮೂನೆ ಸಂ:013785. 4) ಟರ್ಪಾಲು ಮತ್ತು ಹಗ್ಗ.

ಸದಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸೊತ್ತುಗಳಲ್ಲಿ ಮದ್ಯಸಾರವನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸದಿ ಮಾದರಿಯನ್ನು ವಿಶ್ಲೇಷಿಸಿದ ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ತಜ್ಞ, ಮಂಗಳೂರುರವರು ದಿನಾಂಕ:11.05.2000ರ ವರದಿಯಲ್ಲಿ ಮದ್ಯಸಾರದಲ್ಲಿ ಮದ್ಯಸಾರ ಪಮಾಣ 66 ಡಿಗಿ ಒ.ಪಿ (94.76%) ಇರುವುದಾಗಿ ದೃಢೀಕರಣ ಪತ ನೀಡಿರುತ್ತಾರೆ. ಅಬಕಾರಿ ನಿರೀಕ್ಷಕರು, ಗುಪ್ತ ವಾರ್ತದಳ ಮಂಗಳೂರು ವಿಭಾಗ ಇವರ ತನಿಖಾ ವರದಿ ಸಂ:ಇಐಬಿ/ಅ.ಇ.(3) ಪಮಾವ ಸಂ:36/99–2000, ದಿನಾಂಕ:11.05.2000ರಲ್ಲಿ ವಾಹನವನ್ನು ಹೊರತುಪಡಿಸಿ ಉಳಿದ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ. ಅಬಕಾರಿ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ ಅಂದಿನ ಪಾದಿಕಾರದ ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರ ನ್ಯಾಯಾಲಯದ ಆದೇಶ ಸಂ:ಎಸ್‌ಡಿಕೆ:548:ಡಿಟಿಸಿಆರ್:99–2000 ದಿ:15–5–2000 ರ ಅದೇಶದಲ್ಲಿ ಪಕರಣದಲ್ಲಿ ಜಪ್ತು ಪಡಿಸಿಕೊಂಡ ವಾಹನದ ಮುಟ್ಟುಗೋಲು ಪಕಿಯೆಯನ್ನು ಕಾಯ್ದಿರಿಸಿ, ಜಪ್ತು ಪಡಿಸಿಕೊಂಡ 7500 ಲೀಟರು ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯಸಾರವನ್ನು ಮೈಶುಗರ್ ಸಾರಾಯಿ ಸಂಸ್ಕರಣಾ ಘಟಕಕ್ಕೆ ಹಂಚಿಕೆ ಮಾಡಲು ಆದೇಶಿಸಿರುತ್ತಾರೆ.

ಸದಿ ವಾಹನದ ಆರ್.ಸಿ ಮಾಲೀಕರಾದ ಶೀ ಎಸ್.ಗಂಗಯ್ಯ ಅಲಿಯಾಸ್ ಸಿದ್ದ ಗಂಗಯ್ಯ ಬಿನ್ ತೋಪಯ್ಯ, 18 ಕಿ.ಮೀಟರು ತುಮಕೂರು ರಸ್ತೆ, ಮಾದನಾಯಕನ ಹಳ್ಳಿ, ಮಾದವಾರ ಅಂಚೆ, ಬೆಂಗಳೂರು ಇವರು ತಮ್ಮ ವಕೀಲರ ಮುಖಾಂತರ ದಿನಾಂಕ:10.05.2000ರಂದು ಅರ್ಜಿಯನ್ನು ಸಲ್ಲಿಸಿ, ತಾನು ಸದಿ ವಾಹನವನ್ನು ಮೆ: ಗೋವಿಂದ ಇಂಡಸ್ಟ್ರೀಸ್ ಪ್ಲಾಟ್ ನಂ:875, ಗೀಗ್ಸಿನ್ ಇಂಡಸ್ಟ್ರೀಯಲ್ ಎಸ್ಟೇಟ್, ಆನೇಕಲ್ಲು, ಬೆಂಗಳೂರು ಇವರಿಗೆ ಸರಕು ಸಾಗಾಣಿಕೆಗೆ ಬಾಡಿಗೆ ಆಧಾರದಲ್ಲಿ ನೀಡಲಾಗಿದ್ದು, ಸದಿ ಅಪರಾಧಕ್ಕೂ ತನಗೂ ಯಾವುದೇ ಸಂಬಂಧವಿಲ್ಲವೆಂದು ತಿಳಿಸಿ ವಾಹನವನ್ನು ತನ್ನ ಮಧ್ಯಂತರ ಸುಪರ್ದಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ. ಅರ್ಜಿದಾರರಿಗೆ ಈ ಪಾದಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಬಿ ರಂತೆ ಕಾರಣ ಕೇಳಿ ನೋಟಿಸನ್ನು ದಿನಾಂಕ:01.08.2000ರಂದು ನೊಂದಣಿ ಅಂಚೆಯ ಮೂಲಕ ನೀಡಲಾಗಿದ್ದು, ಅರ್ಜಿದಾರರು ಈ ಪಾದಿಕಾರದಿಂದ ನೀಡಿರುವ ಕಾರಣ ಕೇಳಿ ನೋಟಿಸಿಗೆ ಉತ್ತರವನ್ನು ನೀಡಿರುತ್ತಾರೆ. ಸದಿ ಅರ್ಜಿದಾರರು ಸಲ್ಲಿಸಿದ ಅರ್ಜಿಯನ್ನು ಪರಿಶೀಲಿಸಿದ ಅಂದಿನ ಪಾದಿಕಾರವು ವಾಹನದ ಮೌಲ್ಯಕ್ಕೆ ಸಮಾನವಾದ ರೂ.2,00,000/– ಮೌಲ್ಯದ ಬ್ಯಾಂಕ್ ಗ್ಯಾರೆಂಟಿಯನ್ನು ಒದಗಿಸುವ ಹಾಗೂ ಇತರೆ ಷರತ್ತುಗಳಿಗೆ ಅನುಗುಣವಾಗಿ ದಿನಾಂಕ:13.11.2000ರ ಆದೇಶದಲ್ಲಿ ಮಧ್ಯಂತರ ಬಿಡುಗಡೆಗೆ ಆದೇಶಿಸಿದೆ. ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರ ನ್ಯಾಯಾಲಯದ ಆದೇಶ ಸಂ:ಎಸ್‌ಡಿಕೆ: 548:ಡಿಟಿಸಿಆರ್:99–2000 ದಿ:13–11–2000ರ ಆದೇಶದ ವಿರುದ್ಧ ವಾಹನದ ಮಾಲೀಕರು ಮಾನ್ಯ 2ನೇ ಸೆಷನ್ಸ್ ಜಡ್ಜ್ ನ್ಯಾಯಾಲಯದಲ್ಲಿ ಕಿಮಿನಲ್ ಅಫಿಲ್ ಸಂ:168/2000 ಮತ್ತು 169/2000ರ ಮುಖಾಂತರ ಮೊರೆಹೊಕ್ಕು ಆದೇಶದ ಬಗ್ಗೆ ಮೇಲ್ಮನವಿ ಸಲ್ಲಿಸಿದ್ದು, ಮಾನ್ಯ 2ನೇ ಸೆಷನ್ಸ್ ಜಡ್ಜ್ ನ್ಯಾಯಾಧೀಶರು ತಮ್ಮ ಆದೇಶ ಸಂಖ್ಯೆ ಕಿಮಿನಲ್ ಅಫೀಲ್ ನಂ:168/2000 ಮತ್ತು 169/2000 ದಿ:27–5–2000ರಲ್ಲಿ ಈ ಪಾದಿಕಾರವು ಹೊರಡಿಸಿದ ಆದೇಶವನ್ನು ತಳ್ಳಿ ಹಾಕಿ

ರೂ. 2,00,000/– ಮೌಲ್ಯದ ಬ್ಯಾಂಕ್ ಗ್ಯಾರೆಂಟಿಯ ಬದಲು ಅಷ್ಟೇ ಮೊತ್ತದ ಇಂಡೆಮಿನಿಟಿ ಬಾಂಡ್ ಹಾಗೂ ಇಬ್ಬರು ಶ್ಯೂರಿಟಿದಾರರನ್ನು ಒದಗಿಸುವ ಹಾಗೂ ಅಧಿಕೃತ ಅಧಿಕಾರಿಗಳು ಹಾಕಿರುವ ಇತರೆ ಷರತ್ತುಗಳ ಮೇಲೆ ವಾಹನವನ್ನು ಮಧ್ಯಂತರ ಬಿಡುಗಡೆಗೊಳಿಸುವಂತೆ ಆದೇಶ ನೀಡಿರುತ್ತದೆ. ಮಾನ್ಯ ಸೆಷನ್ಸ್ ನ್ಯಾಯಾಲಯದ ಆದೇಶದ ಮೇರೆಗೆ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದ ಆದೇಶ ಸಂ:ಎಸ್‌ಡಿಕೆ:548:ಡಿಟಿಸಿಆರ್:99–2000, ದಿನಾಂಕ:29.12.2000ರಲ್ಲಿ ಅರ್ಜಿದಾರರು 2,00,000/– ಮೌಲ್ಯದ ಇಂಡೆಮ್ನಿನ್ನಿಟಿ ಬಾಂಡ್ ಹಾಗೂ ಇದೇ ಮೊತ್ತಕ್ಕೆ ಸಮಾನವಾದ ಇಬ್ಬರು ಸ್ಥಳೀಯ ಜಾಮೀನುದಾರರನ್ನು ಸಲ್ಲಿಸಿದ್ದಲ್ಲಿ ಹಾಗೂ ಇತರೆ ಷರತ್ತಿಗೊಳಪಟ್ಟು ಅರ್ಜಿದಾರರ ವಶಕ್ಕೆ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಲು ಆದೇಶಿಸಿದೆ.

ಘನ ಸತ್ರ ನ್ಯಾಯಾಲಯದ ಆದೇಶಾನುಸಾರ ವಾಹನದ ಮಾಲೀಕರು ರೂ.2,00,000/– ಇಂಡೆಮಿನಿಟಿ ಬಾಂಡ್ ಮತ್ತು ಶ್ರೀ ವಿಜಯ ಚಂದ್ರ ರೆಡ್ಡಿ ಬಿನ್:ವೆಂಕಟ ರೆಡ್ಡಿ 882 ಚೆನ್ನಪ್ಪ ಬಡಾವಣೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಮತ್ತು ಗೋವಿಂದರಾಜು, ಬಿನ್ ಗಂಗಪ್ಪ, 224, ಕೆಂಚನಹಳ್ಳಿ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರುಗಳನ್ನು ಶ್ಯೂರಿಟಿದಾರರಾಗಿ ಪ್ರಾಧಿಕಾರಕ್ಕೆ ಒಪ್ಪಿಸಿ,ವಾಹನವನ್ನು ದಿನಾಂಕ:04.02.2001ರಂದು ತನ್ನ ಸುಪರ್ದಿಗೆ ಪಡೆದು ಕೊಂಡಿರುತ್ತಾರೆ.

ತದನಂತರದಲ್ಲಿ ವಾಹನದ ಮಾಲೀಕರು ವಾಹನದ ಮಧ್ಯಂತರ ಬಿಡುಗಡೆಗೆ ಸಲ್ಲಿಸಿದ್ದ ಇಂಡೆಮಿನಿಟ್ ಬಾಂಡನ್ನು ಮತ್ತು ಶ್ಯೂರಿಟಿಯನ್ನು ಹಿಂದಕ್ಕೆ ಪಡೆದುಕೊಂಡು ಇಂಡೆಮಿನಿಟಿ ಬಾಂಡ್‌ನ ಮೊತ್ತ ರೂ.2,00,000/–ವನ್ನು ಡಿ.ಡಿ ಸಂ:148770, ದಿನಾಂಕ:11.02.2009ರಂತೆ ಕೆನರಾ ಬ್ಯಾಂಕ್, ಚಿಕ್ಕಬಿದನಕಲ್ಲು, ತುಮಕೂರು, ಬೆಂಗಳೂರು ಇಲ್ಲಿಂದ ಪಡೆದು ಈ ಪ್ರಾಧಿಕಾರಕ್ಕೆ ಒಪ್ಪಿಸಿದ್ದು,ಸದಿ ಮೊತ್ತವನ್ನು ವಾಹನದ ಭದ್ರತೆಯಾಗಿ ಸರ್ಕಾರದ ರೆವೆನ್ಯೂ ಡೆಪಾಸಿಟ್ ಲೆಕ್ಕ ಶೀರ್ಷಿಕೆ ಸಂ:8443–00–101–0–01 ರಲ್ಲಿ ದಿನಾಂಕ:24.02.2009ರಂದು ಠೇವಣಿ ಇಡಲಾಗಿದೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆ ಪರ ಎರಡು ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಅವರುಗಳ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಹಾಗೂ ಪ್ರತಿರಕ್ಷೆ ಸಾಕ್ಷಿಯಾಗಿ ವಾಹನದ ಮಾಲೀಕರ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾ ಅಂಶಗಳು ಈ ಕೆಳಗಿನಂತಿರುತ್ತದೆ.

1. ದಿನಾಂಕ:08.05.2000ರಂದು ಟಾಟಾ ಲಾರಿ ಸಂಖ್ಯೆ: KA-02-A-5687ರಲ್ಲಿ ಯಾವುದೇ ರಹದಾರಿ ಪತ್ರವಿಲ್ಲದೆ ಅಕ್ರಮವಾಗಿ 7500 ಲೀಟರು ಮದ್ಯಸಾರ ಸಾಗಾಣಿಕೆ ಮಾಡಲಾಗಿದೆಯೇ?
2. ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು, ತನಗೆ ತಿಳಿಯದೇ ಅಕ್ರಮ ಮದ್ಯಸಾರ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?
3. ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದೇ?

ಮೇಲಿನ ವಿವಾದಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ–1:**

ಶ್ರೀ ಜಿ.ಕೆ ಸುಬ್ರಹ್ಮಣ್ಯ, ಅಂದಿನ ಅಬಕಾರಿ ನಿರೀಕ್ಷಕರು, ಇಐಬಿ, ಮಂಗಳೂರು ರವರು ದಿನಾಂಕ:08.11.2001ರಂದು ಪ್ರಾಧಿಕಾರದ ಮುಂದೆ ಹಾಜರಾಗಿ ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು, ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು 1998 ರಿಂದ ಮಂಗಳೂರು ಅಬಕಾರಿ ಗುಪ್ತ ವಾರ್ತದಳದಲ್ಲಿ ಅಬಕಾರಿ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸಿದ್ದೆ ಎಂದು, ದಿನಾಂಕ:05.08.2001 ರಂದು ಹಗಲು ಸುಮಾರು 11–45 ಗಂಟೆ ಸಮಯಕ್ಕೆ ಮಂಗಳೂರು ಮಹಾನಗರ ಪಾಲಿಕೆಯ ಪಂಪುವೆಲ್ ರಸ್ತೆಯ ಹತ್ತಿರ ರಾಷ್ಟ್ರೀಯ ಹೆದ್ದಾರಿ 17ರಲ್ಲಿ ಕಾರ್ಯನಿಮಿತ್ತ ಸಿಬ್ಬಂದಿಯವರೊಂದಿಗೆ ಮತ್ತು ಅಬಕಾರಿ ಉಪ ಅಧೀಕ್ಷಕರೊಂದಿಗೆ ಹೋಗುತ್ತಿರುವಾಗ ಪಂಪುವೆಲ್ ವೃತ್ತದ ಉಳ್ಳಾಲ ಕಡೆಗೆ ಹೋಗುವ ರಸ್ತೆಯಲ್ಲಿ ವಾಹನ ಸಂ:KA-02-A-5687 ಲಾರಿ ನಿಂತಿದ್ದು, ಅದರಲ್ಲಿ ಸರಕು ತುಂಬಿದ್ದು ಟರ್ಪಾಲಿನಿಂದ ಮುಚ್ಚಿ ದಾರದಿಂದ ಬಿಗಿದಿದ್ದು, ಸದಿ ಲಾರಿಯ ಹತ್ತಿರ ಹೋಗಿ ನೋಡಲಾಗಿ ಲಾರಿಯಲ್ಲಿ ಚಾಲಕನಿದ್ದು, ಆತನ ಪಕ್ಕದಲ್ಲಿ ಇನ್ನೊಬ್ಬ ವ್ಯಕ್ತಿ ಕುಳಿತಿದ್ದನು. ಸರಕಿನ ಬಗ್ಗೆ ಚಾಲಕನಲ್ಲಿ ವಿಚಾರಿಸಲಾಗಿ ಸುಣ್ಣದ ಚೀಲವೆಂದು ತಿಳಿಸಿದನು. ಸದಿ ಸರಕಿನ ಬಗ್ಗೆ ದಾಖಲಾತಿಗಳನ್ನು ಕೇಳಲಾಗಿ ಮೆ:ಗೋವಿಂದ ಇಂಡಸ್ಟ್ರೀಸ್, ಬೆಂಗಳೂರು ಇಲ್ಲಿಂದ ಮಂಗಳೂರು ಮಾರ್ಕೆಟ್ ರಸ್ತೆಯಲ್ಲಿರುವ ಹಾರ್ಡ್‌ವೇರ್ ಸ್ಟೋರಿಗೆ ಎಂದು ಬರೆದಿದ್ದು, ಅದರಲ್ಲಿ 25 ಕೆ.ಜಿ ತೂಕದ 360 ಚೀಲಗಳು ಇದೆ ಎಂದು ಇನ್ ವಾಯ್ಸ್ ನಲ್ಲಿ ಬರೆದಿತ್ತು. ಇದನ್ನು ನೋಡಿದಾಗ ಚಾಲಕ ಮತ್ತು ಇನ್ನೊಬ್ಬ ವ್ಯಕ್ತಿ ಅನುಮಾನದಲ್ಲಿ ವರ್ತಿಸುತ್ತಿದ್ದು, ವಾಹನದಿಂದ ಸ್ಪಿರಿಟ್‌ನ ಘಾಟು ವಾಸನೆ ಬರುತ್ತಿದ್ದು ಸದಿ ವಾಹನವನ್ನು ವಿವರವಾಗಿ ತಪಾಸಣೆ ಮಾಡಲು ತೀರ್ಮಾನಿಸಿ ಸ್ಥಳದಲ್ಲಿ ದೊರೆತ ಬಾಲಕೃಷ್ಣ ಎಂಬವನನ್ನು ಸಾಕ್ಷಿಯನ್ನಾಗಿ ಲಾರಿ ತಪಾಸಣೆಗೆ ನ್ಯಾಯಾಲಯದ ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲದ ಕಾರಣ, ಸರ್ಚ್ ಮೆಮೊವನ್ನು ತಯಾರಿಸಿ, ಲಾರಿಯಲ್ಲಿದ್ದ ಟರ್ಪಾಲನ್ನು ಸರಿಸಿ ನೋಡಲಾಗಿ ಮೇಲ್ನೋಟಕ್ಕೆ ಸುಣ್ಣದ ಚೀಲವನ್ನು ತುಂಬಿದ್ದು ಕಂಡು ಬಂತು. ಸುಣ್ಣದ ಚೀಲವನ್ನು ಸರಿಸಿ ನೋಡಿದಾಗ ಕೆಳಗಡೆ ಬಿಳಿ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ದ್ರಾವಕ ತುಂಬಿದ್ದು, ಸದಿ ಕ್ಯಾನಿನ ಮುಚ್ಚಳ ತೆಗೆದು ನೋಡಲಾಗಿ ಸ್ಪಿರಿಟ್ ಎಂಬುವುದಾಗಿ ಕಂಡು ಬಂತು. ವಿವರವಾಗಿ ನೋಡಲಾಗಿ 215 ಬಿಳಿ ಬಣ್ಣದ ಕ್ಯಾನುಗಳಲ್ಲಿ ಸ್ಪಿರಿಟ್ ತುಂಬಿದ್ದು, ಸದಿ ಕ್ಯಾನುಗಳನ್ನು 142 ಸುಣ್ಣದ ಚೀಲಗಳಿಂದ ಮುಚ್ಚಲಾಗಿತ್ತು. ಈ ರೀತಿ ಸ್ಪಿರಿಟ್ ನ್ನು ಹೊಂದಿ ಸಾಗಾಣೆ ಮಾಡಲು ರಹದಾರಿ ಪತ್ರವನ್ನು ಕೇಳಲಾಗಿ ಚಾಲಕನಾಗಲೀ, ಇನ್ನೊಬ್ಬ ವ್ಯಕ್ತಿಯಾಗಲೀ ಹಾಜರುಪಡಿಸಲಿಲ್ಲ. ರಹದಾರಿ ಪತ್ರಗಳಿಲ್ಲದೇ ಸ್ಪಿರಿಟ್ ಸಾಗಾಟವು ರಾಜ್ಯ ಅಬಕಾರಿ ಕಾಯಿದೆಗೆ ವಿರೋಧವೆಂದು ಪಂಚರ ಸಮಕ್ಷಮ ಲಾರಿಯಲ್ಲಿದ್ದವರಿಗೆ ವಿರೋಧವೆಂದು ತಿಳಿಸಿ ನಂತರ ಕ್ಯಾನಿನಲ್ಲಿದ್ದ ಸ್ಪಿರಿಟನ್ನು ಅಂದಾಜು ಮಾಡಲಾಗಿ 211 ಕ್ಯಾನುಗಳಲ್ಲಿ ತಲಾ 35 ಲೀಟರಿನಂತೆ ಮತ್ತು 3 ಕ್ಯಾನುಗಳಲ್ಲಿ ತಲಾ 30 ಲೀಟರಿನಂತೆ ಮತ್ತು 1 ಕ್ಯಾನಿನಲ್ಲಿ 25 ಲೀಟರು ಹೀಗೆ ಒಟ್ಟು 7500 ಲೀ ಸ್ಪಿರಿಟ್ ಕಂಡು

ಬಂತು. ನಂತರ ಸದಿ ಕ್ಯಾನುಗಳಿಂದ ರಾಸಾಯನಿಕ ಪರೀಕ್ಷೆಗೆ ಪತಿ ಕ್ಯಾನಿನಿಂದ 375 ಎಂ.ಎಲ್‌ನಂತೆ ಬೇರೆ ಸೀಸೆಗಳಲ್ಲಿ ತೆಗೆದುಕೊಂಡು ಸೀಸೆಗಳಿಗೆ ಮತ್ತುಕ್ಯಾನುಗಳಿಗೆ ಅನುಕಮವಾಗಿ ಸೀಲು ಮಾಡಲಾಯಿತು. ಚಾಲಕನ ಹೆಸರು ಮತ್ತು ವಿಳಾಸವನ್ನು ಕೇಳಲಾಗಿ ಲಿಂಗೇಗೌಡ, ಬಿನ್ ಸಿದ್ದಪ್ಪ, ಪ್ರಾಯ 28 ವರ್ಷ, ಮತ್ತು ಇನ್ನೊಬ್ಬನ ಹೆಸರು ಸಿದ್ದಪ್ಪ ಬಿನ್ ತಿಮ್ಮಪ್ಪ ಬೆಂಗಳೂರು ಎಂದು ತಿಳಿಸಿದರು. ನಂತರ ಮೊಹರಿನ ನಮೂನೆಯನ್ನು ತಯಾರಿಸಿ ಆರೋಪಿಗಳ ಹೆಸರು ಮತ್ತು ವಿಳಾಸದ ಗುರುತು ಚೀಟಿಗಳನ್ನು ಮಾದರಿ ಸೀಸೆಗಳಿಗೆ ಹಚ್ಚಿಸಲಾಯಿತು. ಮತ್ತು ಕ್ಯಾನುಗಳನ್ನು ಗುರುತಿಸಲಾಯಿತು. ಸದಿ ಲಾರಿಯು ಕಂದು ಬಣ್ಣದಿಂದ ಕೂಡಿದ್ದು ನಂಬರ್: KA-02-A-5687 ಎಂದು ಲಾರಿಯ ಹಿಂದೆ ಮತ್ತು ಮುಂದೆ ಬದಿಗೆ ಬರೆದಿರುತ್ತದೆ. ಲಾರಿಯು ಟಾಟಾ ಕಂಪೆನಿ ನಿರ್ಮಿತವಾಗಿದ್ದು, ಚಾಲಕನು ಚಾಲಕನ ಲೈಸೆನ್ಸ್ ಮತ್ತು ವಾಹನದ ದಾಖಲಾತಿಗಳನ್ನು ಹಾಜರುಪಡಿಸಿರುತ್ತಾನೆ. ರಹದಾರಿ ಪತಗಳಿಲ್ಲದೇ ಇದ್ದ ಹಾಗೂ ಸ್ಪಿರಿಟ್ ಸಾಗಾಟವು ರಾಜ್ಯ ಅಬಕಾರಿ ಕಾಯಿದೆಗೆ ವಿರೋಧವೆಂದು ಆರೋಪಿಗಳಿಗೆ ತಿಳಿಸಿ ಸ್ಥಳದಲ್ಲಿಯೇ ಮಹಜರು ತಯಾರಿಸಿ ಸ್ಪಿರಿಟ್ ಮತ್ತು ಇತರ ಎಲ್ಲಾ ಸೊತ್ತುಗಳನ್ನು ಆರೋಪಿಗಳೊಂದಿಗೆ ದಸ್ತಗಿರಿ ಮಾಡಿ ಕಛೇರಿಗೆ ಕರೆತಂದು ಆರೋಪಿಗಳ ವಿರುದ್ಧ ತಕ್ಷೀರನ್ನು ದಾಖಲಿಸಿಕೊಂಡು ಅದೇ ದಿವಸ ಆರೋಪಿಗಳನ್ನು ನ್ಯಾಯಾಧೀಶರ ಮುಂದೆ ಹಾಜರುಪಡಿಸಲಾಯಿತು. ಸಂಬಂಧಪಟ್ಟ ದಾಖಲಾತಿಗಳನ್ನು ಅಧಿಕೃತ ಅಧಿಕಾರಿಗಳ ಮುಂದೆ ಹಾಜರುಪಡಿಸಲಾಯಿತು. ನಂತರ ತಕ್ಷೀರಿಗೆ ಸಂಬಂಧ ಪಟ್ಟಂತೆ ದಾಖಲೆಗಳನ್ನು ಮತ್ತು ಸೊತ್ತುಗಳನ್ನು ಉಳ್ಳಾಲ ವಲಯ ನಿರೀಕ್ಷಕರಿಗೆ ಹಸ್ತಾಂತರಿಸಲಾಯಿತು. ಸದಿ ದಿನದಂದು ಜಪ್ತು ಪಡಿಸಿದ ವಾಹನ ಮತ್ತು ಸೊತ್ತುಗಳನ್ನು ನೋಡಿ ಮಹಜರನ್ನು ನಿಶಾನೆ ಪಿ–1 ಎಂದು (ಮಹಜರಿನ ಮೂಲ ಪತಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ) ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ–2 ಎಂದು, ಮಹಜರಿನ ಮೇಲಿನ ಸಹಿಯನ್ನು ನಿಶಾನೆ ಪಿ–2 ಎ ಎಂದು, ತಯಾರಿಸಿದ ಸೊತ್ತು ಪಟ್ಟಿಯನ್ನು ನಿಶಾನೆ ಪಿ–3 ಎಂದೂ ಗುರುತಿಸಲಾಯಿತು ಎಂದು ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಪಕರಣದಲ್ಲಿ ತಾನಲ್ಲದೇ ತನ್ನ ಜೊತೆಗೆ ಎರಡು ಜನ ಗಾರ್ಡ್ಸ್ ಮತ್ತು ಅಬಕಾರಿ ಉಪ ಅಧೀಕ್ಷಕರಾದ ಶೀ ಎಂ.ಕೆ. ಸೋಮಯ್ಯ ಇದ್ದರು ಎನ್ನುವುದು ಸರಿ, ಪಕರಣದ ದಿವಸ ನಾನು ಬೆಳಿಗ್ಗೆ 11–30 ರಿಂದ 11–45 ರ ಸುಮಾರಿಗೆ ಪಕರಣ ಸ್ಥಳಕ್ಕೆ ಮುಟ್ಟಿದೆನು. ಆ ದಿವಸ ಉಳ್ಳಾಲ ಕಡೆಗೆ ಹೋಗುತ್ತಿದ್ದೆ, ಪಂಪುವೆಲ್ ವೃತ್ತ 5 ರಸ್ತೆಗಳು ಕೂಡುವ ವೃತ್ತ ಎನ್ನುವುದು ಸರಿ, ಪಕರಣದ ನಡೆದ ಸ್ಥಳದಲ್ಲಿ ವಾಹನ ಉಳ್ಳಾಲದ ಕಡೆಗೆ ಮುಖಮಾಡಿ ನಿಂತಿತ್ತು. ವಾಹನವು ಆಗ ಚಲಿಸುತ್ತಿರಲಿಲ್ಲ. ಮಹಜರಿನಲ್ಲಿ ತಾವು ಯಾವ ವಾಹನದಲ್ಲಿ ಹೋಗುತ್ತಿದ್ದೇವೆ ಎನ್ನುವುದನ್ನು ನಮೂದಿಸಿರುವುದಿಲ್ಲ, ವಾಹನದಲ್ಲಿ ಸರ್ಕಲ್ ನಿಂದ ಸುಮಾರು 25 ಗಜ ದೂರದಲ್ಲಿ ನಿಂತಿತ್ತು. ಮಹಜರಿನಲ್ಲಿ ಸ್ಥಳ ಚೆಕ್‌ಬಂಧಿ ಬರೆದಿಲ್ಲ, ವೃತ್ತದಿಂದ 20 ಗಜ ದೂರದಲ್ಲಿ ಎಡಭಾಗಕ್ಕೆ ಉಳ್ಳಾಲಕ್ಕೆ ಹೋಗುವ ಬಸ್ ಸ್ಟಾಪ್ ಇದೆ. ರಸ್ತೆಯ ಬಲ ಬದಿಯಲ್ಲಿ ಪಂಪುವೆಲ್ ವೃತ್ತದಿಂದ 30 ಗಜ ದೂರದಲ್ಲಿ ಉಳ್ಳಾಲ ಕಡೆ ಬರುವಂತಹ ಬಸ್ ಸ್ಟಾಪ್ ಇದೆ ಎಂದರೆ ಸರಿ, ಸೆಕ್ಷನ್ 54 ರ ಪಕಾರ ಮಾಡಿದ ಸರ್ಚ್ ಮೆಮೋವನ್ನು ಪಾದಿಕಾರದ ಮುಂದೆ ಹಾಜರುಪಡಿಸಿಲ್ಲವೆಂದರೆ ಸರಿ, ಆದರೆ ನ್ಯಾಯಾಲಯಕ್ಕೆ ಹಾಜರುಪಡಿಸಿದ್ದೇನೆ, ಸರ್ಚ್‌ಮೆಮೋವನ್ನು ತಯಾರು ಮಾಡಿದ ಕಾರಣವನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿಲ್ಲವೆನ್ನುವುದು ಸರಿಯಲ್ಲ, ಸ್ಟಾಕ್ ಪೌಡರ್‌ನ ಇನ್ ವಾಯ್ಸ್ ಪತಿಯನ್ನು ಈ ಪಾದಿಕಾರಕ್ಕೆ ಹಾಜರುಪಡಿಸಿಲ್ಲ ಎಂದರೆ ಸರಿ, ಆದರೆ ನ್ಯಾಯಾಲಯದ ಮುಂದೆ ಹಾಜರುಪಡಿಸಿದ್ದೇನೆ, ಕ್ಯಾನುಗಳಿಗೆ ಕಮ ಸಂಖ್ಯೆ ಕೊಟ್ಟಿದ್ದೇನೆ ಆದರೆ ಆ ವಿಷಯವನ್ನು ಮಹಜರಿನಲ್ಲಿ ಬರೆದಿಲ್ಲ ಎನ್ನುವುದು ಸರಿ, ಸ್ಯಾಂಪಲ್‌ಗಳಿಗೆ ಕಮ ಸಂಖ್ಯೆ ಕೊಟ್ಟಿದ್ದೇನೆ ಮಹಜರಿನಲ್ಲಿ ಬರೆದಿಲ್ಲ ಎನ್ನುವುದು ಸರಿ, ಸ್ಯಾಂಪಲ್ ಬಾಟಲಿಗಳನ್ನು ಕಛೇರಿಯಿಂದ ತರಿಸಿದ್ದೇನೆ, ಪಂಪುವೆಲ್ ವೃತ್ತವು ಬಹಳಷ್ಟು ವಾಹನ ಮತ್ತು ಜನನಿಬಿಡ ಪದೇಶವಾಗಿದೆ. ಅದರ ಸುತ್ತ ಕೆಲವು ಹೋಟೆಲ್ ಮತ್ತು ಅಂಗಡಿಗಳು ಇದೆ ಎಂದರೆ ಸರಿ, ನಾನು ವಾಹನವನ್ನು ತಪಾಸಣೆ ಮಾಡುವಾಗ ತುಂಬಾ ಜನ ದೂರದಿಂದ ನೋಡುತ್ತಿದ್ದರು, ಅಲ್ಲಿಯೇ ಮಹಜರಿಗೆ ಸಹಿ ಮಾಡಿದ ಒಬ್ಬರು ಸ್ಥಳೀಯರಲ್ಲಿ ಹಾಜರಿದ್ದ ರಿಕ್ಷಾ ಚಾಲಕನಾಗಿದ್ದನು. ಅಬಕಾರಿ ಉಪ ಅದೀಕ್ಷಕರಾದ ಶೀ ಎಂ.ಕೆ. ಸೋಮಯ್ಯನವರು ಮಹಜರಿನಲ್ಲಿ ಸಹಿ ಮಾಡಲಿಲ್ಲ, ಅವರು ನಮಗೆ ಮಾರ್ಗದರ್ಶನ ನೀಡಿ ಹೊರಟು ಹೋದರು. ಆ ದಿನದ ಪಕರಣದಲ್ಲಿ ಯಾವುದೇ ಕ್ಯಾನುಗಳನ್ನು (ಮದ್ಯ ತುಂಬಿದ) ಜಪ್ತು ಮಾಡಲಿಲ್ಲವೆಂದರೆ ಸರಿಯಲ್ಲ, ಅಂದು ಸುಣ್ಣದ ಪುಡಿಯನ್ನು ಬ್ಯಾಗ್‌ಗಳಲ್ಲಿ ಸಾಗಿಸುತ್ತಿದ್ದರು ಎಂದರೆ ಸರಿಯಲ್ಲ, ವಾಹನದಲ್ಲಿ ಇನ್ ವಾಯ್ಸ್ ಗೆ ಸಂಬಂಧಿಸಿದ ಒಟ್ಟು ಸಂಖ್ಯೆಯಲ್ಲಿ ಚಾಕು ಪೌಡರ್ ಇರುವ ಬ್ಯಾಗುಗಳು ಇದ್ದಿಲ್ಲ, ಕೇವಲ 142 ಬ್ಯಾಗುಗಳು ಮಾತ ಇದ್ದವು. ಆ ದಿವಸ ಪಂಪುವೆಲ್ ವೃತ್ತದಲ್ಲಿ ವಾಹನ ಜಪ್ತು ಮಾಡಿರುವುದಿಲ್ಲವೆಂದರೆ ಸರಿಯಲ್ಲ, ಬೆಂಗಳೂರಿನಿಂದ ಮಂಗಳೂರಿಗೆ ಚಾಕ್ ಪೌಡರ್ ತುಂಬಿಸಿಕೊಂಡು ಬಂದಿರುವ ವಾಹನವನ್ನು ಅಬಕಾರಿ ಇಲಾಖೆಗೆ ತೆಗೆದುಕೊಳ್ಳುವ ಬಗ್ಗೆ ಸುಳ್ಳು ಕೇಸನ್ನು ದಾಖಲು ಮಾಡಿದ್ದೇನೆ ಎಂದರೆ ಸರಿಯಲ್ಲ, ಈ ವಾಹನದಲ್ಲಿ ಯಾವುದೇ ರೀತಿಯ ಮದ್ಯಸಾರ ಸಾಗಾಟ ಮಾಡುತ್ತಿರಲಿಲ್ಲ ಎಂದರೆ ಸರಿಯಲ್ಲ, ಅರ್ಜಿದಾರರನ್ನು ನಾನು ಪಥಮ ಮಾಹಿತಿಯಲ್ಲಿ ಆರ್.ಸಿ ಪುಸ್ತಕದಲ್ಲಿರುವ ಹೆಸರನ್ನು ಓದಿ ಪಕರಣ ದಾಖಲಿಸಿರುತ್ತೇನೆ ಎನ್ನುವುದು ಸರಿ, ಮೇಲಾಧಿಕಾರಿಗಳ ಒತ್ತಾಯಗೋಸ್ಕರ ಸುಳ್ಳು ಪ್ರಕರಣವನ್ನು ದಾಖಲು ಮಾಡಿರುತ್ತೇನೆ ಎನ್ನುವುದು ಸರಿಯಲ್ಲವೆಂದು ತಮ್ಮ ಸಾಕ್ಷ್ಯವನ್ನು ನುಡಿದಿರುತ್ತಾರೆ.

ಸರ್ಕಾರಿ ಅಭಿಯೋಜಕರು ಸಾಕ್ಷಿದಾರರನ್ನು ಮರು ವಿಚಾರಣೆ ನಡೆಸಲಾಗಿ ಅರ್ಜಿದಾರರನ್ನು (3ನೇ ಅರೋಪಿ) ಅವರ ಹೆಸರು ಆರ್.ಸಿ ಪುಸ್ತಕದಲ್ಲಿ ನಮೂದು ಇದ್ದ ಕಾರಣಕ್ಕಾಗಿ, ಅಷ್ಟೇ ಅಲ್ಲದೇ ಅವರು ಪ್ರಕರಣಕ್ಕೆ ಭಾಗಿಯಾಗಿದ್ದ ಕಾರಣಕ್ಕೆ ಆರೋಪಿಯನ್ನಾಗಿ ಮಾಡಲಾಗಿದೆ.

ರಕ್ಷಣಾ ಪರ ವಕೀಲರ ಮರು ಪಾಟೀ ಸವಾಲಿಗೆ ಉತ್ತರಿಸುತ್ತಾ ಈ ಪಕರಣದಲ್ಲಿ ತಾನು ಪಕರಣದ ತನಿಖಾಧಿಕಾರಿ ಅಲ್ಲವೆಂದರೆ ಸರಿ, ಆರ್.ಸಿ ಪುಸ್ತಕದಲ್ಲಿ ಅರ್ಜಿದಾರರ ಹೆಸರು ಇರುವುದಲ್ಲದೇ ಬೇರೆ ಯಾವುದೇ ದಾಖಲಾತಿಗಳು ಅರ್ಜಿದಾರರು ಆರೋಪದಲ್ಲಿ ಭಾಗಿಯಾಗಿದ್ದಾರೆ ಎನ್ನಲು ಯಾವುದೇ ದಾಖಲೆ ತನ್ನಲ್ಲಿ ಇಲ್ಲ.

**ಪ್ರಾ.ಸಾ–2:**

ಶೀ ರಮೇಶ್ ಅಮೀನ್, ಅಬಕಾರಿ ಮುಖ್ಯ ರಕ್ಷಕ ,ಗುಪ್ತ ವಾರ್ತದಳ,ಮಂಗಳೂರು ಇವರು ಪಾದಿಕಾರದ ಮುಂದೆ ದಿನಾಂಕ:03.06.2004ರಂದು ಹಾಜರಾಗಿ ಪ್ರಕರಣದ ಮಾದರಿ ಸೀಸೆಗಳನ್ನು ರಾಸಾಯನ ವಿಶ್ಲೇಷಣಾ ಕಛೇರಿಗೆ ಕೊಂಡೊಯ್ದ

ಬಗ್ಗೆ ತನ್ನ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ಮಂಗಳೂರು ಗುಪ್ತ ವಾರ್ತದಳದಲ್ಲಿ 2000ನೇ ಇಸವಿಯಲ್ಲಿ ಮುಖ್ಯ ರಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿನಾಂಕ:11.05.2000 ರಂದು 375 ಎಂಎಲ್ ನ 215 ಬಾಟಲಿಗಳನ್ನು ಅಬಕಾರಿ ನಿರೀಕ್ಷಕರಿಂದ ಪಡೆದುಕೊಂಡು ಅದರೊಂದಿಗೆ ಮಾದರಿ ಸೀಲು ಮತ್ತು ಕೋರಿಕೆ ಪತ್ರ ಇವುಗಳನ್ನು ರಾಸಯನಿಕ ತಜ್ಞರಲ್ಲಿಗೆ ಅದೇ ದಿನ ಸಲ್ಲಿಸಿದೆನು. ದಿನಾಂಕ:11.05.2000ರಂದು ತಜ್ಞರು ಪರೀಕ್ಷಿಸಿದ 215 ಮಾದರಿ ಸೀಸೆಗಳನ್ನು ಮತ್ತು ತಜ್ಞರ ವರದಿ ಪಡೆದುಕೊಂಡು ಅಬಕಾರಿ ನಿರೀಕ್ಷಕರು,ಗುಪ್ತ ವಾರ್ತಾದಳ ಇವರಿಗೆ ತಲುಪಿಸಿದೆ. ವರದಿಯನ್ನು ತಾನು ನೋಡಿ ಅದರ ಮೂಲ ಪತಿ ಮಾನ್ಯ ನ್ಯಾಯಾಲಯದಲ್ಲಿದ್ದು ಅದರ ಜೆರಾಕ್ಸ್ ಪ್ರತಿಯನ್ನು ನೋಡಿ ವಕೀಲರ ಆಕ್ಷೇಪಣೆ ಮೇರೆಗೆ ನಿಶಾನೆ ಪಿ–4 ಎಂದು ಗುರುತಿಸಲಾಯಿತು.

ರಕ್ಷಣಾ ಪರ ವಕೀಲರ ಪಾಟೀ ಸವಾಲಿಗೆ ಪಾಸ.–2 ರವರು ಉತ್ತರಿಸುತ್ತಾ ಸದ್ರಿ ದಿನದಂದು ಕೊಂಡ್ಯೊಯ್ದ ಮಾದರಿ ಸೀಸೆಗಳು ಈ ತಕ್ಷಿರಿಗೆ ಸಂಬಂಧಿಸಿದಲ್ಲ ಎಂದರೆ ಸರಿಯಲ್ಲ.

**ಡಿಡಬ್ಲ್ಯೂ–1:**

ರಕ್ಷಣಾ ಪರ ಆರ್.ಸಿ. ಮಾಲೀಕರಾದ ಶ್ರೀ ಗಂಗಯ್ಯ, ಬಿನ್ ತೋಪಯ್ಯ ಅರ್ಜಿದಾರರು ಇವರು ದಿನಾಂಕ:10.02.2005ರಂದು ಸಾಕ್ಷ್ಯ ನೀಡುತ್ತಾ ನಾನು ಒಂದು ಸಾರಿಗೆ ಸಂಸ್ಥೆಯನ್ನು ಬೆಂಗಳೂರಿನಲ್ಲಿ ನಡೆಸುತ್ತಿದ್ದೇನೆ. ಅದರ ಹೆಸರು ಪಬ್ಲಿಕ್ ರೋಡ್‌ಲೈನ್ಸ್, ನಾನು ಕಮೀಷನ್ ಎಜೆಂಟ್ ಹಾಗೂ ಟ್ರಾನ್ಸ್ ಪೋರ್ಟ್ ಕಾಂಟ್ರಕ್ಟರ್ ಕೂಡಾ ಆಗಿರುತ್ತೇನೆ. ವಾಹನ ಲಾರಿ ಸಂಖ್ಯೆ: KA-02-A-5687 ನೊಂದಣಿ ಮಾಡಿರುತ್ತೇನೆ. ಹಾಗೂ ನನಗೆ ಒಂದೇ ಲಾರಿ ಇರುತ್ತದೆ. ನನಗೆ ವಾಹನ ಚಾಲನೆ ಮಾಡುವುದು ಗೊತ್ತಿಲ್ಲ. ಆದುದರಿಂದಾಗಿ ಲಿಂಗೇಗೌಡ ಎಂಬವರನ್ನು ಚಾಲಕನನ್ನಾಗಿ ನೇಮಿಸಿಕೊಂಡಿರುತ್ತೇನೆ. ಅದರ ಕ್ಲೀನರ್ ಆಗಿ ಸಿದ್ದಪ್ಪ ಎಂಬವರು ಇದ್ದರು. ವಾಹನವನ್ನು ಅಬಕಾರಿ ಅಧಿಕಾರಿಗಳು ವಶಪಡಿಸಿಕೊಳ್ಳುವ 2 ವರ್ಷ ಮೊದಲು ಲಿಂಗೇಗೌಡರನ್ನು ಚಾಲಕನನ್ನಾಗಿ ನೇಮಿಸಿದ್ದೆನು. ಲಿಂಗೇಗೌಡರನ್ನು ಚಾಲಕನಾಗಿ ನೇಮಿಸುವ ಸಮಯದಲ್ಲಿ ಲಾರಿಯಲ್ಲಿ ಯಾವುದೇ ಕಾನೂನು ಬಾಹಿರ ಸಾಗಾಣಿಕೆ ಮಾಡಬಾರದು ಎಂದು ಆತನಿಗೆ ಬುದ್ಧಿವಾದ ಹೇಳಿದ್ದೆನು. ಅವನ ಪೂರ್ವಚರಿತೆಯನ್ನು ಸಹಾ ಕೇಳಿ ತಿಳಿದುಕೊಂಡು ಆತನ ವಿರುದ್ಧ ಯಾವುದೇ ಕ್ರಿಮಿನಲ್ ಪ್ರಕರಣಗಳು ಇಲ್ಲದೇ ಇದ್ದುದ್ದರಿಂದ ಆತನನ್ನು ಚಾಲಕನನ್ನಾಗಿ ನೇಮಿಸಿದ್ದೆನು. ಸದ್ರಿ ಚಾಲಕನಿಗೆ ಪ್ರತಿ ದಿನ ರೂ. 100 ಭತ್ಯೆ ಮತ್ತು ತಿಂಗಳಿಗೆ 2000 ರೂಪಾಯಿ ಸಂಬಳ ಕೊಡುತ್ತಿದ್ದೆ. ದಿನಾಂಕ:05.05.2000ರಂದು ಮೆ: ಗೋವಿಂದ ಇಂಡಸ್ಟ್ರೀಸ್ ಬೆಂಗಳೂರು ಇವರು ತಮ್ಮ ವಾಹನವನ್ನು ಬೆಂಗಳೂರಿನಿಂದ ಮಂಗಳೂರಿಗೆ ಚಾಕ್‌ಪೌಡರ್ ತರಲು ಬಾಡಿಗೆಗೆ ಪಡೆದಿದ್ದರು. ಚಾಕ್‌ಪೌಡರನ್ನು ಬೆಂಗಳೂರಿನಿಂದ ಮಂಗಳೂರಿಗೆ ತರಲು ಮೆ:ಗೋವಿಂದ ಇಂಡಸ್ಟ್ರೀಸ್ ರವರು ಇನ್‌ವಾಯ್ಸ್ ಸಂ:91/2000–01 ದಿನಾಂಕ:06.05.2000 ಇದನ್ನು ಕೊಟ್ಟಿದ್ದು, ಸದ್ರಿ ಸೊತ್ತನ್ನು ತರಲು ಒಪ್ಪಿದ್ದೆವು. ದಿನಾಂಕ:06.05.2000ರಂದು ಬೆಂಗಳೂರಿನಿಂದ ನಮ್ಮ ಲಾರಿ ಮಂಗಳೂರಿಗೆ ಹೊರಟಿದ್ದು ನಿಗದಿತ ಸಮಯಕ್ಕೆ ಮಂಗಳೂರಿಗೆ ತಲುಪದೇ ಇದ್ದದ್ದು, ದಿನಾಂಕ:09.05.2000 ರಂದು ತಿಳಿದುಬಂದು ಅಬಕಾರಿ ಅಧಿಕಾರಿಗಳು ವಾಹನವನ್ನು ಜಪ್ತು ಪಡಿಸಿಕೊಂಡ ವಿಷಯ ಗೊತ್ತಾಗಿ ಅಬಕಾರಿ ಕಛೇರಿಗೆ ಬಂದು ವಿಚಾರಿಸಲಾಗಿ ಭಯವಾಯಿತು. ದಿನಾಂಕ:10.05.2000 ರಂದು ಕಛೇರಿಯಲ್ಲಿ ಒಂದು ಅರ್ಜಿಯನ್ನು ಸಲ್ಲಿಸಿ ನಮ್ಮ ವಾಹನದಲ್ಲಿ ಯಾವುದೇ ಕಳ್ಳ ಸಾಗಾಣಿಕೆ ಮಾಡಿಲ್ಲವೆಂದು, ತಾನು ನಿರ್ದೋಷಿಯೆಂದು, ನನಗೆ ಯಾವುದೇ ವಿಷಯ ಗೊತ್ತಿಲ್ಲವೆಂದು ತಿಳಿಸಿದೆನು. ಮೆ:ಗೋವಿಂದ ಇಂಡಸ್ಟ್ರೀಸ್ ರವರು ನಮಗೆ ನೀಡಿದ ಇನ್ ವಾಯ್ಸ್ ಪ್ರತಿಯನ್ನು ಅಬಕಾರಿ ಅಧಿಕಾರಿಗಳು ನನ್ನ ವಾಹನದೊಂದಿಗೆ ಪಡೆದಿರುತ್ತಾರೆಂಬ ವಿಷಯ ಪ್ರಥಮ ಮಾಹಿತಿ ವರದಿ ಮತ್ತು ಮಹಜರು ನೋಡಿ ಗೊತ್ತಾಯಿತು. ಈ ಪ್ರಕರಣದಲ್ಲಿ ಕಳ್ಳಸಾಗಾಣಿಕೆಯು ನನ್ನ ಕುಮ್ಮಕ್ಕಿನಿಂದ ನಡೆದಿರುವುದಿಲ್ಲ, ಪ್ರಕರಣದಲ್ಲಿ ಪ್ರತ್ಯೇಕ್ಷವಾಗಿ ಅಥವಾ ಪರೋಕ್ಷವಾಗಿ ಆಗಲಿ ತಾನು ಭಾಗಿಯಾಗಿಲ್ಲ,ಪ್ರಕರಣದಲ್ಲಿ ಅಬಕಾರಿ ಅಧಿಕಾರಿಗಳು ತನ್ನ ವಾಹನದಿಂದ ಯಾವುದೇ ಅಬಕಾರಿ ವಸ್ತುಗಳನ್ನು ವಶಪಡಿಸಿಕೊಂಡಿಲ್ಲ ಈ ಕಾರಣಗಳಿಂದ ತನ್ನ ವಿರುದ್ಧ ಮಾಡಲಾದ ಮುಟ್ಟುಗೋಲು ಪ್ರಕರಣವನ್ನು ವಜಾ ಮಾಡಿ ತನ್ನ ವಾಹನವನ್ನು ತನಗೆ ಬಿಡುಗಡೆ ಮಾಡಲು ಆದೇಶ ನೀಡಬೇಕಾಗಿ ಪ್ರಾರ್ಥಿಸುತ್ತೇನೆ.

ಅರ್ಜಿದಾರರು ಸರ್ಕಾರಿ ಅಭಿಯೋಜಕರ ಪಾಟೀ ಸವಾಲಿಗೆ ಉತ್ತರಿಸುತ್ತಾ ನಮ್ಮ ಚಾಲಕ ನೆಲಮಂಗಲ ನಿವಾಸಿಯಾಗಿರುತ್ತಾನೆ. ಅವನ ತಂದೆ ತಾಯಿ ವ್ಯವಸಾಯ ಮಾಡುತ್ತಾರೆ. ನಾನು ನಮ್ಮ ಚಾಲಕನಿಗೆ ಬುದ್ಧಿವಾದ ಹೇಳಿದ್ದೇನೆ ಎಂದು ಸುಳ್ಳು ಹೇಳುತ್ತಿದ್ದೇನೆಂದರೆ ಸರಿಯಲ್ಲ, ದಿನಾಂಕ:06.05.2000ರಂದು ಹೊರಟ ನಮ್ಮ ವಾಹನವು ನಿಗಧಿತ ಸಮಯಕ್ಕೆ ಮಂಗಳೂರನ್ನು ತಲುಪದೇ ಇದ್ದುದ್ದಕ್ಕೆ ನಾನು ನಾಲ್ಕು ದಿನ ಕಾಯ್ದಿದ್ದು, ಏಕೆಂದರೆ ವಾಹನವು ಬ್ರೇಕ್ ಡೌನ್ ಆಗಿರಬಹುದು ಎಂಬ ಕಾರಣದಿಂದ. ಈ ಘಟನೆಯ ನಂತರ ನಮ್ಮ ಚಾಲಕನನ್ನು ಕೆಲಸದಿಂದ ತೆಗೆದೆನು. ದಿನಾಂಕ:08.05.2000ರಂದು ನಮ್ಮ ವಾಹನದಲ್ಲಿ ಸ್ಪಿರಿಟ್ ತುಂಬಿದ ಕ್ಯಾನುಗಳನ್ನು ಸಾಗಾಟ ಮಾಡಿರುವ ವಿಷಯ ನನಗೆ ಮೊದಲೇ ಗೊತ್ತಿತ್ತು ಎಂದರೆ ಸರಿಯಲ್ಲ, ನಾನು ಈ ಪ್ರಕರಣಕ್ಕೋಸ್ಕರ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

ಈ ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ:08.05.2000ರಂದು ಜಪ್ತು ಪಡಿಸಿರುವ ಲಾರಿ ಸಂ:KA-02-A-5687 ಇದರಲ್ಲಿ ಯಾವುದೇ ರಹದಾರಿ ಇಲ್ಲದೇ ಅಕ್ರಮವಾಗಿ ಮದ್ಯಸಾರವನ್ನು ಸಾಗಾಟ ಮಾಡಿರುವ ಬಗ್ಗೆ ಅಭಿಯೋಗ ಪರ ಪಿಡಬ್ಲೂ–1 ರವರು ನೀಡಿದ ಸಾಕ್ಷಿ ಹಾಗೂ ದಾಖಲಾತಿಗಳಿಂದ ದೃಢಪಟ್ಟಿರುವುದರಿಂದ ಹಾಗೂ ವಾಹನದ ಮಾಲೀಕರು ತನ್ನ ನಿರುಪರಾಧಿತ್ವವನ್ನು ಸಾಬೀತುಪಡಿಸುವರೇ ಯಾವುದೇ ದಾಖಲಾತಿಗಳನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಲು ವಿಫಲರಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ

ಇಂತಹ ಅಕ್ರಮ ಮದ್ಯಸಾರ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನದ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಆದರೆ ಈ ಪ್ರಕರಣದ ವಾಹನ ಮಾಲೀಕರಾದ ಶ್ರೀ ಗಂಗಯ್ಯ ಬಿನ್ ತೋಪಯ್ಯ ಇವರು ಪ್ರಾಧಿಕಾರದಿಂದ ನೀಡಲಾದ ನೋಟಿಸುಗಳನ್ನು ಗೌರವಿಸಿ ಪ್ರಾಧಿಕಾರದ ಮುಂದೆ ಹಾಜರಾಗಿ ತನ್ನ ನಿರಾಪರಾಧಿತ್ವವನ್ನು ಸಾಕ್ಷಿ ವಿಚಾರಣೆ ವೇಳೆಯಲ್ಲಿ ಮೌಖಿಕವಾಗಿ ತಿಳಿಸಿದ್ದರಾದರೂ, ದಾಖಲೆ ಪುರಾವೆಗಳೊಂದಿಗೆ ಸಾಬೀತುಪಡಿಸುವಲ್ಲಿ ವಿಫಲರಾಗಿರುತ್ತಾರೆ. ತನ್ನ ಚಾಲಕನನ್ನು ನೇಮಿಸುವ ಸಂದರ್ಭದಲ್ಲಿ

ಯಾವುದೇ ಅಕಮ ಸಾಗಾಣಿಕೆಗೆ ಲಾರಿಯನ್ನು ಬಳಸಬಾರದೆಂದು ಮೌಖಿಕವಾಗಿ ಬುದ್ದಿವಾದ ಹೇಳಿರುವುದೇ ಹೊರತು ಈ ಬಗ್ಗೆ ಯಾವುದೇ ಕಾನೂನು ರಕ್ಷಣಾತ್ಮಕವಾಗಿ ಮುಚ್ಚಳಿಕೆ, ವಗೈರೆ ದಾಖಲಾತಿಗಳನ್ನು ಪಡೆದುಕೊಂಡಿರುವುದಿಲ್ಲ. ಈ ಮೇಲಿನ ಕಾರಣಗಳಿಂದ ಅರ್ಜಿದಾರರು ಪ್ರಕರಣದಿಂದ ನುಣುಚಿಕೊಳ್ಳುವ ಉದ್ದೇಶದಿಂದ ತನ್ನ ರಕ್ಷಣಾ ಸಾಕ್ಷಿಯನ್ನು ಪ್ರಾದಿಕಾರದ ಮುಂದೆ ನೀಡಿರುವುದೇ ಹೊರತು ಕಾನೂನಿಗನುಗುಣವಾಗಿ ಯಾವುದೇ ದಾಖಲಾತಿಗಳನ್ನು ಒದಗಿಸಲು ವಿಫಲರಾಗಿರುತ್ತಾರೆ. ಅಲ್ಲದೇ ವಾಹನದಲ್ಲಿ ಅಕಮ ಅಬಕಾರಿ ಸೊತ್ತುಗಳನ್ನು ಸಾರ್ವಜನಿಕರು ಬಳಸುವ ಸುಣ್ಣದ ಪೌಡರಿನ ಅಡಿಯಲ್ಲಿ ಮರೆಯಾಗಿ ಸಾಗಾಟ ಮಾಡಿರುವುದು ಅಕಮ ಸಾಗಾಣಿಕೆ ಎಂಬುವುದು ನಿಸ್ಸಂದೇಹವಾಗಿ ಸಾಭೀತಾಗಿರುವುದು ಹಾಗೂ ಅರ್ಜಿದಾರರು ವಾಹನವನ್ನು ಬಾಡಿಗೆಗೆ ಒದಗಿಸಿಕೊಡುವ ಸಂದರ್ಭದಲ್ಲಿ ಯಾವುದೇ ಅಕಮ ಸೊತ್ತುಗಳ ಸಾಗಾಣಿಕೆಗೆ ವಾಹನವನ್ನು ಬಳಸಬಾರದೆಂದು ಟ್ರಾನ್ಸ್ ಪೋರ್ಟ್ ಕಂಪೆನಿಯೊಂದಿಗೆ ಯಾವುದೇ ಕರಾರು ಮಾಡಿಕೊಂಡಿರುವುದು ಕಂಡುಬರುವುದಿಲ್ಲ. ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕ ವಾಗಿ ಪರಿಗಣಿಸಿದೆ.

ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನ ಲಾರಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿ ಪ್ರಾಧಿಕಾರವು ತೀರ್ಮಾನಿಸಿ, ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನ ಸಂ:KA-02-A-5687ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.8

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ನೇ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅದಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ನಿರೀಕ್ಷಕರು (3), ಅಬಕಾರಿ ಗುಪ್ತ ವಾರ್ತಾದಳ, ಮಂಗಳೂರು ಇವರ ತಕ್ಷೀರು ಸಂಖ್ಯೆ:36/1999 ದಿನಾಂಕ:08.05.2000ರಲ್ಲಿ ಜಪ್ತುಪಡಿಸಿಕೊಂಡಿರುವ ಲಾರಿ ಸಂಖ್ಯೆ: KA-02-A-5687 (ಚಾಸೀಸ್ ನಂ. 360-324GVQ 723089 ಮತ್ತು ಇಂಜಿನ್ ನಂ: 697-D23 GVQ 766355)ನ್ನು ನಿಯಮ 43ಎ ರನ್ವಯ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿನಾಂಕ:29.12.2000ರಂದು ವಾಹನ ಬಿಡುಗಡೆಗೊಳಿಸಿ, ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಸದಿ ಮಧ್ಯಂತರ ಬಿಡುಗಡೆ ಹೊಂದಿರುವ ಲಾರಿ ಸಂ: KA-02-A-5687 ನ್ನು ಈ ಪ್ರಾದಿಕಾರಕ್ಕೆ ಈ ಆದೇಶದ 30 ದಿನಗಳ ಒಳಗೆ ಒಪ್ಪಿಸಲು ಆದೇಶಿಸಿದೆ. ತಪ್ಪಿದ್ದಲ್ಲಿ ಭದತೆಯಾಗಿ ನೀಡಿರುವ ಇಂಡೆಮ್ನಿಟಿ ಬಾಂಡ್‌ಗೆ ಬದಲಾಗಿ ಡಿ.ಡಿ ಮೂಲಕ ಪಡೆದು ಸರ್ಕಾರದ ರೆವೆನ್ಯೂ ಡೆಪಾಸಿಟ್ ಖಾತೆ ಸಂ:8443–00–101–0–01 ರಲ್ಲಿ ಇಡಲಾದ ರೂ.2,00,000/– ಮೊತ್ತವನ್ನು ಸರ್ಕಾರದ ಅಬಕಾರಿ ಇಲಾಖಾ ಶೀರ್ಷಿಕೆ ಸಂ: 0039–00–150–0–00 ಇದಕ್ಕೆ ಜಮೆ ಮಾಡಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:16.06.2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹ್ಮಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ–1 : ಶೀ ಜಿ.ಕೆ.ಸುಬಹ್ಮಣ್ಯ,ಅಬಕಾರಿ ನಿರೀಕ್ಷಕರು(3),
ಗುಪ್ತ ವಾರ್ತದಳ,ಮಂಗಳೂರು ವಿಭಾಗ.

ಪ್ರಾ.ಸಾ–2 : ಶ್ರೀ ರಮೇಶ್ ಅಮೀನ್, ಅಬಕಾರಿ ಮುಖ್ಯ ರಕ್ಷಕ, ಗುಪ್ತ ವಾರ್ತಾದಳ, ಮಂಗಳೂರು ವಿಭಾಗ.

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | |
|---|---|
| ನಿಶಾನೆ–1 | : ಯಾದಾಸ್ತಿನ ಪ್ರತಿ |
| ನಿಶಾನೆ–2 | : ಪ್ರಥಮ ವರ್ತಮಾನ ವರದಿ |
| ನಿಶಾನೆ–2ಎ | : ಪ್ರಥಮ ಮಾಹಿತಿ ವರದಿ ಮೇಲಿನ ಸಹಿ |
| ನಿಶಾನೆ–3 | : ಸೊತ್ತು ಪಟ್ಟಿ |
| ನಿಶಾನೆ–4 | : ರಸಾಯನಿಕ ವಿಶ್ಲೇಷಣಾ ವರದಿ ಪ್ರತಿ |

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :**

**ಅರ್ಜಿದಾರರ ಹೇಳಿಕೆ :** ಶ್ರೀ ಗಂಗಯ್ಯ ಬಿನ್ ತೋಪಯ್ಯ, 18 ಕಿ.ಮೀ ತುಮಕೂರು ರಸ್ತೆ, ಮಾದನಾಯಕನ ಹಳ್ಳಿ, ಮಾದಾವರ ಅಂಚೆ, ಬೆಂಗಳೂರು.

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:** – ಯಾವುದು ಇಲ್ಲ–

**ನೂರ್ ಮಹ್ಮಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.627